Sivapillai
30/5/36

ಶ್ರೀ.

ಗೀತಗೋವಿಂದ ಮಹಾಕಾವ್ಯೇ, ಪ್ರಥಮಸ್ಸರ್ಗ ಪ್ರಾರಂಭಃ.

ಶ್ರೀ ಮತೆ ಯದುನಂದನಾಯನಮಃ.

ಮೇಘೈರ್ಮೇದುರಮಂಬರಂವನಭುವಶ್ಶ್ಯಾಮಾಸ್ತಮಾಲದ್ರುಮೈ।ರ್ನಕ್ತಂ
ಭೀರುರಯಂತ್ವಮೇವತದಿಮಂರಾಧೇಗೃಹಂಪ್ರಾಪಯ।ಇತ್ಥಂನಂದನಿದೇಶತಶ್ಚ
ಲಿತಯೋಃಪ್ರತ್ಯಧ್ವಕುಂಜದ್ರುಮಂ।ರಾಧಾಮಾಧವಯೋರ್ಜಯಂತಿಯಮು
ನಾಕೂಲೇರಹಃಕೇಳಯಃ।ನತ್ವಾಮುಕುಂದಪಾದಾಬ್ಜಂಸ್ಮೃತ್ವಾಹೃದಿಸರಸ್ವ
ತೀಂ।ತನೋಮಿ ಗೀತ ಗೋವಿಂದಟೀಕಾಂರಸಿಕರಂಜನೀಂ॥

ಟೀ. ಹೇರಾಧೇ-ಎಲೈರಾಧೆಯೆ, ಅಂಬರಂ-ಆಕಾಶವು, ಮೇಘೈಃ-ಮೇಘಗಳಿಂದ, ಮೇದುರಂ - ವ್ಯಾಪ್ತವಾದುದು, ವನಭುವಃ - ಅರಣ್ಯಭೂಮಿಗಳು ತಮಾಲದ್ರುಮೈಃ- ಹೊಂಗೆಮರಗಳಿಂದ ಶ್ಯಾಮಾಃ - ಕಪ್ಪಾಗಿರುವವು, ಅಯಂ-ಈ ಕೃಷ್ಣನು,ನಕ್ತಂ-ರಾತ್ರಿಯಲ್ಲಿ, ಭೀರುಃ - ಭಯಪಡುವಂಥಾವನು,ತತ್ - ಆಕಾರಣದ್ದೆಸೆಯಿಂದ, ಇಮಂ- ಈ ಕೃಷ್ಣಸ್ವಾಮಿಯನ್ನು, ತ್ವಮೇವ-ನೀನೆ,ಗೃಹಂ-ಮನೆಯನ್ನು, ಪ್ರಾಪಯ-ಹೊಂದಿಸು,ಇತ್ಥಂ - ಈ ಪ್ರಯಾಗಿ. ನಂದನಿದೇಶತಃ, ನಂದ - ನಂದಗೋಪನ, ನಿದೇಶತಃ-ಅಪ್ಪಣೆದೆಸೆಯಿಂದ, ಚಲಿತಯೋಃ-ಹೊರಟಂಥಾ, ರಾಧಾಮಾಧವಯೋಃ - ರಾಧಾ ಶ್ರೀಕೃಷ್ಣರುಗಳ, ಪ್ರತ್ಯಧ್ವಕುಂಜದ್ರುಮಂ-ಮಾರ್ಗದಲ್ಲಿದ್ದ, ಪ್ರತಿಲತಾಗೃಹಗಳಲ್ಲಿ, ಪ್ರತಿವೃಕ್ಷಮೂಲಗಳಲ್ಲಿ, ರಹಃಕೇಳಯಃ - ಏಕಾಂತಕ್ರೀಡೆಗಳು, ಯಮುನಾಕೂಲೇಯಮುನಾ - ಕಾಳಿಂದೀನದಿಯಕೂಲೆ - ತೀರದಲಿ ಜಯಂತಿ-ಸರ್ವೋತ್ಕೃಷ್ಟಂಗಳಾಗಿವೆ॥ ತಾತ್ಪರ್ಯ- ಎಲೈರಾಧೆಯೆ! ಹೊಂಗೆಮರಗಳಿಂ ತುಂಬಿದ ಮಾರ್ಗದೊಳ್ ರಾತ್ರಿಯಲ್ಲದಿ ಯಿಡಲಂಜುವ ಈ ಕೃಷ್ಣನಂ ಮಂದಿರವಂ ಪೊಂದಿಸೆಂದು ನಂದಗೋಪರ ನುಡಿಯಿಂ ಕೃಷ್ಣನೊಡನೆ ತೆರಳಿದ ರಾಧೆಯೊಳ್ ಶ್ರೀ ಕೃಷ್ಣನು ರಚಿಸಿದ ಸರ್ವೋತ್ಕೃಷ್ಟವಾದ ಸುರತಂಗಳು ಸಮಗಿಷ್ಟಾರ್ಥ ಮನ್ನೀಯಲೆಂದು ಕವಿಯು ಆಶೀರ್ವಚನಂ ಮಾಡಿದನು. ... ... ... [೧]

ವಾಗ್ದೇವತಾಚರಿತಚಿತ್ರಿತಚಿತ್ತಸದ್ಮಾ। ಪದ್ಮಾವತೀಚರಣಚಾರಣಚ

ಕ್ರವರ್ತೀ|ಶ್ರೀವಾಸುದೇವರತಿಕೇಳಿಕಥಾಸಮೇತ|ಮೇತಂಕರೋತಿಜಯದೇವಕವಿಃ ಪ್ರಬಂಧಂ॥ಟೀ. ವಾಗ್ದೇವತಾಚರಿತಚಿತ್ರಿತ ಚಿತ್ತಸದ್ಮಾ, ವಾಗ್ದೇವತಾ-ಸರಸ್ವತಿಯ ಚರಿತ- ಚರಿತ್ರಗಳಿಂದ,ಚಿತ್ರಿತ - ಅಲಂಕರಿಸಲ್ಪಟ್ಟ,ಚಿತ್ತ - ಮನಸ್ಸೆಂಬ, ಸದ್ಮಾ - ಮನೆಯುಳ್ಳ, ಪದ್ಮಾವತೀಚರಣ ಚಾರಣಚಕ್ರವರ್ತೀ, ಪದ್ಮಾವತೀ - ಪದ್ಮಾವತೀಯೆಂಬ ಸ್ತ್ರೀಯ, ಚರಣ-ಪಾದಗಳ, ಚಾರಣ-ನರ್ತನ ಮಾಡಿಕೊಳ್ಳುವದರಲ್ಲಿ ಚಕ್ರವರ್ತೀ - ಸಮರ್ಥನಾದ, ಜಯದೇವ ಕವಿಃ - ಜಯದೇವನೆಂಬ ಕವಿಯು ಶ್ರೀವಾಸುದೇವ ರತಿಕೇಳಿ-ಕಥಾಸಮೇತಂ, ಶ್ರೀವಾಸುದೇವ-ಶ್ರೀಕೃಷ್ಣನ ರತಿಕೇಳಿ- ಸುರತ ಕ್ರೀಡೆಯ, ಕಥಾ - ಚರಿತ್ರೆಯೊಡನೆ,ಸಮೇತಂ - ಕೂಡಿರುವ, ಏತಂಪ್ರಬಂಧಂ - ಈ ಗೀತಗೋವಿಂದವೆಂಬ ಗ್ರಂಥವನ್ನು ಕರೋತಿ-ಮಾಡುತಲಿಧಾನೆ॥ ತಾ. ಪ್ರತಿದಿವಸದಲ್ಲಿ ಶ್ರೀಕೃಷ್ಣನ ಪೂಜಾ ಸಮಯದೊಳ್ ಪದ್ಮಾವತಿ ಯೆಂಬ ತನ್ನ ತರುಣಿಯಂ ಕುಣಿಸುತ ಗಾನವಂ ಗೈಯುತಲಿರುವ ಜಯದೇವಕವಿಯು ಸರಸ್ವತಿಯಂ ನೆನದು ಈ ಗೀತ ಗೋವಿಂದವೆಂಬ ಗ್ರಂಥವಂ ರಚಿಸುತಲಿದ್ಧಾನೆ. ... ... ... ॥೨॥

ಶ್ಲೋ.ಯದಿಹರಿಸ್ಮರಣೆಸರಸಂಮನೋಯದಿವಿಲಾಸಕಥಾಸುಕುತೂಹಲಂ। ಮಧುರಕೋಮಲಕಾಂತಪದಾವಳಿಂ ಶೃಣುತದಾಜಯದೇವಸರಸ್ವತೀಂ॥

ಟೀ. ಹರಿಸ್ಮರಣೆ - ಶ್ರೀಕೃಷ್ಣಸ್ಮರಣೆಯಲ್ಲಿ, ಮನಃ - ಮನಸ್ಸು, ಸರಸಂಯದಿ-ಪ್ರೀತಿಯುಳ್ಳದ್ದು,ಆದರೆ ವಿಲಾಸಕಥಾಸು - ಶೃಂಗಾರ ಕಥೆಗಳಲ್ಲಿ ಕುತೂಹಲಂಯದಿ - ಉತ್ಸಾಹವಿದ್ದದ್ದು ಆದರೆ, ತದಾ - ಆವಾಗ, ಮಧುರಕೋಮಲಕಾಂತಪದಾವಳಿಂ, ಮಧುರ- ಕಿವಿಗಿಂಪಾದ ಕೋಮಲ - ಮೃದುವಾದ, ಕಾಂತ-ಮನೋಹರವಾದ,ಪದ-[illegible]ಗಳ, ಆವಳಿಂ-ಪಜ್ಙ್ಕಯುಳ್ಳ ಜಯದೇವ ಸರಸ್ವತೀಂ, ಜಯದೇವ - ಜಯದೇವನೆಂಬ ಕವಿಯ ಸರಸ್ವತೀಂ-ವಾಕ್ಯವನ್ನು ಶೃಣು-ಕೇಳು॥ ತಾತ್ಪರ್ಯ. ಎಲೈ ಜನಗಳಿರಾ ಶ್ರೀಕೃಷ್ಣನ ಸ್ಮರಣೆಯಲ್ಲು ಶೃಂಗಾರ ಕಥೆಗಳಲ್ಲು ಅಭಿಲಾಷೆ ಯುಳ್ಳ [illegible] ಜಯದೇವ ಕವಿಯ ಗೀತಗೋವಿಂದ ರೂಪವಾದ ವಾಕ್ಯವಂ ಕೇಳಿರಿ.

ಶ್ಲೋ.ವಾಚಃಪಲ್ಲವಯತ್ಯುಮಾಪತಿಧರಸ್ಸಂದರ್ಭಶುದ್ಧಿಂಗಿರಾಂಜಾನೀತೆ ಜಯದೇವಏವಶರಣಶ್ಲಾಘ್ಯೋದುರೂಹಾದ್ರುತೆ॥ ಶೃಂಗಾರೋತ್ತರಸತ್ಪ್ರಮೇಯ ರಚನೈರಾಚಾರ್ಯ ಗೋವರ್ಧನಃ ಸ್ಪರ್ಧೀಕೋಪಿನವಿಶ್ರುತಃ ಶ್ರುತಧರೋಧೋಯೀಕವಿಕ್ಷ್ಮಾಪತಿಃ॥ ಟೀ. ಉಮಾಪತಿಧರಃ-ಉಮಾಪತಿಧರನೆಂಬುವ[illegible]

ಳಗಿ

ತೆ॥ ಕ್ಷತ್ರಿಯರುಧಿರಮಯೆಜಗದಪಗತಪಾಪಂ॥ಸ್ನಪಯಸಿಪಯಸಿಶಮಿ
ತಭವತಾಪಂ॥ ಕೇಶವಧೃತ ಭೃಗುಪತಿರೂಪ ಜಯ. ಟೀ. ಪರಶುರಾಮಾ
ವತಾರವಂ ಸ್ತುತಿಗೈಯುತಲಿಧಾನೆ. ಧೃತಭೃಗುಪತಿರೂಪ, ಧೃತ - ಧರಿ
ಸಲ್ಪಟ್ಟ ಭೃಗುಪತಿರೂಪ-ಪರಶುರಾಮಾವತಾರವುಳ್ಳ, ಹೇಕೇಶವ - ಎಲೈ
ಕೃಷ್ಣನೆ, ಕ್ಷತ್ರಿಯರುಧಿರಮಯೆ, ಕ್ಷತ್ರಿಯ-ಕ್ಷತ್ರಿಯರ, ರುಧಿರಮಯೆ-ರ
ಕ್ತರೂಪವಾದ, ಪಯಸಿ-ಉದಕದಲ್ಲಿ ಜಗತ್-ಲೋಕವನ್ನು, ಅಪಗತಪಾ
ಪಂ, ಅಪಗತ-ಹೋಗಲಾಡಿಸಲ್ಪಟ್ಟ, ಪಾಪಂ - ಪಾಪವುಳ್ಳೋಣ ಹಾ
ಗೋಹಾಗೆ (ಮತ್ತು) ಶಮಿತಭವತಾಪಂ, ಶಮಿತ - ಶಾಂತವಾಡಲ್ಪಟ್ಟ
ಭವ-ಸಂಸಾರದ, ತಾಪಂ-ಸಂತಾಪವುಳ್ಳೋಣಹಾಗೋಹಾಗೆ, ಸ್ನಪಯ
ಸಿ-ಸ್ನಾನಮಾಡಿಸುತಲಿದ್ದೀಯೆ. ... ... ॥೬॥

ಪ. ವಿತರಸಿದಿಕ್ಷುರಣೆ ದಿಕ್ಪತಿಕಮನೀಯಂದಶಮುಖಮೌಳಿಬಲಿಂರಮಣೀ
ಯಂ॥ಕೇಶವಧೃತ ರಘುಪತಿರೂಪ ಜಯ. ಟೀ. ಶ್ರೀರಾಮಾವತಾರವ
ನ್ನೀರ್ತನೆ ಗೈಯುತಲಿಧಾನೆ. ಧೃತರಘುಪತಿರೂಪ, ಧೃತ - ಧರಿಸಲ್ಪಟ್ಟ
ರಘುಪತಿರೂಪ-ಶ್ರೀ[illegible]ರಾಮಾವತಾರವುಳ್ಳ, ಹೇಕೇಶವ-ಎಲೈಕೃಷ್ಣನೆ, ದಿಕ್ಪ
ತಿಕಮನೀಯಂ, ದಿಕ್ಪ[illegible] ದಿಕ್ಪಾಲಕರುಗಳಿಂದ, ಕಮನೀಯಂ - ಅಪೇಕ್ಷಿ
ಸಲ್ಪಡುವ [illegible] ಧೃತ[illegible], ಧೃತ-ಧರಿಸ್ಪ, ದಶಮುಖಮೌ
[illegible] ಕುಂಡಲಗಳುಳ್ಳ ಕಲಿತಲಲಿತವನಮಾಲಿಕ್, ಕಲಿತ - ಪ್ರಕಾಶಿಸು
ತ್ತಿರುವ, ಲಲಿತ- ಮನೋಹರವಾದ, ವನಮಾಲಿಕ್- ತುಲಸೀಮಾಲೆಯುಳ್ಳ
[illegible]ಹೇದೇವಹರೇ-ಎಲೈಸ್ವಾಮಿಯೆ,ಜಯಜಯ-ಸರ್ವೋತ್ಕೃಷ್ಟನಾಗಿರು.

ಪ. ದಿನಮಣಿಮಂಡಲಮಂಡನ ಭವಖಂಡನ ಮುನಿಜನಮಾನಸಹಂ
ಸ ಜಯ. ಟೀ. ದಿನಮಣಿಮಂಡಲಮಂಡನ, ದಿನಮಣಿ-ಸೂರ್ಯನ, ಮಂಡ
ಲ-ಬಿಂಬಕ್ಕೆ, ಮಂಡನ-ಅಲಂಕಾರನಾದ, ಭವಖಂಡನ-ಸಂಸಾರನಾಶ
ಕನಾದ, ಮುನಿಜನಮಾನಸಹಂಸ, ಮುನಿಜನ - ಋಷಿಗಳ, ಮಾನಸ-
ಮನಸ್ಸೆಂಬ ಮಾನಸ ಸರಸ್ಸಿಗೆ ಹಂಸ-ಹಂಸಸ್ವರೂಪನಾದ, ಹೇಹರೇ-
ಎಲೈಸ್ವಾಮಿಯೆಜಯ.

ಪ. ಕಾಳಿಯನಿಷಧರಭಂಜನ ಜನರಂಜನ ಯದುಕುಲನಳಿನದಿನೇಶ॥ಜಯ
ಟೀ. ಕಾಳಿಯವಿಷಧರಭಂಜನ, ಕಾಳಿಯವಿಷಧರ,- ಕಾಳಿಂಗಸರ್ಪ
ವನ್ನು, ಭಂಜನ-ಮೆಟ್ಟಿದಂಥಾ, ಜನರಂಜನ-ಜನಗಳಿಗೆ, ಪ್ರಿಯನಾ[illegible]
[illegible]ಮಾಡುವ, ಯದುಕುಲನಳಿನದಿನೇಶ, ಯದು-ಯಾದವರ, [illegible]ಲ- [illegible]

ೀತಂ-ಮಂಗಳಕರವಾದಗೀತೆಯು, ಮುದಂ- ಸಂತೋಷವನ್ನು, ಕುರು
ಮಾಡುತಲಿಧೆ. ತಾ. ಈ ಶ್ರೀಕೃಷ್ಣನಸ್ತೋತ್ರವಂ ಕೇಳುವರಿಗೆ ಸಂ
ೋಷವನ್ನುಂಟು ಮಾಡುವದು. ... ... ॥೪॥

ಶ್ಲೋ. ಪದ್ಮಾಪಯೋಧರತಟೀಪರಿರಂಭಲಗ್ನಕಾಶ್ಮೀರಮುದ್ರಿತಮುರೊ
ಧುಸೂದನಸ್ಯ। ವ್ಯಕ್ತಾನುರಾಗಮಿವ ಖೇಲದನಂಗಖೇದಸ್ವೇದಾಂಬುಪೂರ
ನುಪೂರಯತು ಶ್ರಿಯಂ ವಃ॥ ಟೀ. ಪದ್ಮಾಪಯೋಧರತಟೀಪರಿರಂಭಲಗ್ನ
ಶ್ಮೀರಮುದ್ರಿತಂ, ಪದ್ಮಾ-ಲಕ್ಷ್ಮಿಯ, ಪಯೋಧರತಟೀ- ಸ್ತನತಟದ,
ರಿರಂಭ-ಆಲಿಂಗನದಿಂದ, ಲಗ್ನ-ಸಂಬಂಧಿಕೊಂಡಿರುವ, ಕಾಶ್ಮೀರ-ಕುಂ
ಮದಿಂದ, ಮುದ್ರಿತಂ- ಗುರುತುಮಾಡಲ್ಪಟ್ಟ, (ಆದಕಾರಣವೆ) ವ್ಯ
ತ್ತಾನುರಾಗಮಿವ, ವ್ಯಕ್ತ- ಹೊರಗೆಕಾಣುತಲಿರುವ, ಅನುರಾಗಮಿವ-
ೀತಿಯುಳ್ಳದ್ದೊ ಯೆಂಬಂತಿರುವ, ಖೇಲದನಂಗಖೇದಸ್ವೇದಾಂಬುಪೂರಂ,
ಲತ್-ಕ್ರೀಡಿಸುತಲಿರುವ, ಅನಂಗ- ಮನ್ಮಥನಿಂದುಂಟಾದ, ಖೇದ-ಆಯಾ
ಂ ಹುಟ್ಟಿದ, ಸ್ವೇದಾಂಬು- ಬೆವರ್ನೀರಿನ, ಪೂರಂ- ಪ್ರವಾಹವುಳ್ಳ, ಮ
ಸೂದನಸ್ಯ-ಶ್ರೀಕೃಷ್ಣನ, ಉರಃ-ವಕ್ಷಸ್ಥಲವು, ವಃ-ನಿಮ್ಮಗಳಿಗೆ, ಶ್ರಿ
- ಸಂಪತ್ತನ್ನು, ಅನುಪೂರಯತು - ಸಂಪೂರ್ಣವಾಗುಂಟುಮಾಡಲಿ॥
ತಾ. ಲಕ್ಷ್ಮೀದೇವಿಯ ಕುಚಕುಂಭ ಕುಂಕುಮಸಂಬಂಧದಿಂ ಕೆಂಪಾದಶ್ರೀ
ಷ್ಣನ ವಕ್ಷಸ್ಥಲವು ನಿಮಗೆ ಸಂಪತ್ತನ್ನು ಅಭಿವೃದ್ಧಿ ಮಾಡಲಿ. ॥೫॥

ಶ್ಲೋ. ವಸಂತೇವಾಸಂತೀಕುಸುಮಸುಕುಮಾರೈರವಯವೈರ್ಭ್ರಮಂತೀಂ
ಂತಾರೇಬಹುವಿಹಿತಕೃಷ್ಣಾನುಸರಣಾಂ। ಅಮಂದಂಕಂದರ್ಪಜ್ವರಜನಿತ
ಂತಾಕುಲತಯಾವಲದ್ಬಾಧಾಂರಾಧಾಂಸರಸಮಿದಮೂಚೆಸಹಚರೀ॥
ಟೀ. ವಸಂತೆ-ವಸಂತಋತುವಿನಲ್ಲಿ, ವಾಸಂತೀಕುಸುಮಸುಕುಮಾರೈಃ
ಸಂತೀಕುಸುಮ-ಇರುವಂತಿಗೆ ಪುಷ್ಪದಂತೆ, ಸುಕುಮಾರೈಃ - ಮೃದು
ಗಿರುವ, ಅವಯವೈಃ - ಕರಚರಣಾದ್ಯವಯವಗಳಿಂದ, ಕಾಂತಾರೆ-
ೊಡ್ಡ ಅರಣ್ಯದಲ್ಲಿ, ಬಹುವಿಹಿತ ಕೃಷ್ಣಾನುಸರಣಾಂ, ಬಹು --ಅಧಿಕ
ಗಿ, ವಿಹಿತ - ಮಾಡಲ್ಪಟ್ಟ, ಕೃಷ್ಣಾನುಸರಣಾಂ - ಕೃಷ್ಣಾನುಗಮ
ುಳ್ಳವಳಾಗಿ, ಭ್ರಮಂತೀಂ - ತಿರುಗಾಡುತಲಿರುವ, ಅಮಂದಂ - ಅಧಿಕ
ಗಿ, ಕಂದರ್ಪಜ್ವರಜನಿತ ಚಿಂತಾಕುಲತಯಾ, ಕಂದರ್ಪಜ್ವರ - ಮ
ೋದ್ರೇಕದಿಂದ, ಜನಿತ-ಉಂಟಾದ, ಚಿಂತಾ-ವ್ಯಸನದಿಂದ, ಆಕುಲತ
-- ವ್ಯಾಕುಲಳಾಗಿರೋದರಿಂದ, ವಲದ್ಬಾಧಾಂ, ವಲತ್--ಅಧಿ

ವೃದ್ಧಿಯಾಗುವ, ಬಾಧಾಂ- ಮನೋವ್ಯಥೆಯುಳ್ಳ, ರಾಧಾಂ - ರಾಧೆಯಂ ಕುರಿತು, ಸಹಚರೀ - ಸಖಿಯು, ಇದಂ - ಈಮುಂದೆ ಹೇಳುವಪರಿಯಾಗಿ, ಸರಸಂ - ಮಧುರವಾಗಿರೋಣ ಹ್ಯಾಗೋಹಾಗೆ, ಊಚೆ - ಹೇಳಿದಳು॥

ತಾ. ವಸಂತಕಾಲದಲ್ಲಿ ಶ್ರೀಕೃಷ್ಣನ ವಿರಹವಂ ಸಹಿಸಲಾರದೆ ವ್ಯಥೆ ಪಡುತಿರ್ದ ರಾಧಾದೇವಿಯಂ ಕುರಿತೋರ್ವ್ವಸಖಿ ಯೊಂದಾನೊಂದು ಸು ಯಂನುಡಿದಳು. ... ... ॥೭

ತೃತೀಯಾಷ್ಟಪದೀ ಪ್ರಾರಂಭಃ. ರಾಗ ವಸಂತ.

ಪ. ಲಲಿತಲವಂಗಲತಾಪರಿಶೀಲನ ಕೋಮಲಮಲಯಸಮೀರೆ॥ಮಧುಕ ನಿಕರಕರಂಬಿತಕೋಕಿಲಕೂಜಿತಕುಂಜಕುಟೀರೆ ॥ಪ॥ ವಿಹರತಿಹರಿರಿಹಸ ವಸಂತೆ ನೃತ್ಯತಿಯುವತಿಜನೇನಸಮಂ ಸಖಿವಿರಹಿಜನಸ್ಯದುರಂತೇ. ವಿಹ ತಿಹರಿರಿಹಸರಸವಸಂತೆ. ಮೂರನೆಅಷ್ಟಪದೀ. ಟೀ. ಲಲಿತ-ಮನೋ ವಾದ, ಲವಂಗಲತಾ-ಲವಂಗಬಳ್ಳಿ, ಪರಿಶೀಲನ- ಸಂಬಂಧದಿಂದ, ಕೋ ಮಲ-ಮೃದುವಾದ, ಮಲಯಸಮೀರೆ-ಮಲಯಪರ್ವತದಘಾಳಿಯುಳ್ಳ, ಧುಕರ-ತುಂಬಿಗಳ, ನಿಕರ-ಸಮೂಹಗಳಿಂದ, ಕರಂಬಿತ -ವ್ಯಾಪ್ತವ ಕೋಕಿಲ-ಕೋಗಿಲೆಗಳ, ಕೂಜಿತ-ಧ್ವನಿಗಳುಳ್ಳ, ಕುಂಜಕುಟೀರೆ-ಲ ಹಗಳುಳ್ಳ, ವಿರಹಿಜನಸ್ಯ-ವಿರಹಿಗಳಿಗೆ, ದುರಂತೇ-ದುಃಖಕರವಾದವ ವುಳ್ಳ, ಇಹ- ಈಸರಸವಸಂತೆ, ಸರಸ-ಮನೋಹರವಾದ, ವಸಂತೆ-ವ ತಕಾಲದಲ್ಲಿ, ಹರಿಃ - ಶ್ರೀಕೃಷ್ಣನು, ಯುವತಿಜನೇನಸಮಂ - ತರುಣೀ ಕೂಡಗೂಡಿ, ವಿಹರತಿ -- ಕ್ರೀಡಿಸುತ್ತಾನೆ, ನೃತ್ಯತಿಚ - ನರ್ತನ ಮಾಡುತ್ತಾನೆ. ॥

ಪ. ಉನ್ಮದಮದನಮನೋರಥಪಥಿಕವಧೂಜನಜನಿತವಿಲಾಪೆ ಅಳಿಕ ಸಂಕುಲಕುಸುಮಸಮೂಹನಿರಾಕುಲವಕುಳಕಲಾಪೆ. ವಿಹರತಿ॥ ಟೀ. ನ್ಮದ- ಅಧಿಕವಾದಮದವುಳ್ಳ, ಮದನ-ಮನ್ಮಥನಿಂದುಂಟಾದ, ಮನೋರಥ ಅಭಿಲಾಷೆಯಿಂದ, ಪಥಿಕ-ಮಾರ್ಗಸ್ಥರಾದ, ವಧೂಜನ-ಸ್ತ್ರೀಜನಗಳಿಂ ಜನಿತ-ಉಂಟುಮಾಡಲ್ಪಟ್ಟ, ವಿಲಾಪ-ಪ್ರಲಾಪವುಳ್ಳ, ಅಳಿಕುಲ- ತುಂ ಳಗುಂಪುಗಳಿಂದ, ಸಂಕುಲ- ಕೇರಿಕೊಂಡಿರುವ, ಕುಸುಮಸಮೂ ಹೂವಿನಜೊಂಪಲುಗಳಿಂದ, ನಿರಾಕುಲ - ತುಂಬಿರುವ, ವಕುಳ - ಮರಗಳ, ಕಲಾಪೆ- ಸಮೂಹವುಳ್ಳ, ವಸಂತೇ-ವಸಂತಕಾಲದಲ್ಲಿ,

ಪ. ಮದನಮಹೀಪತಿಕನಕದಂಡರುಚಿಕೇಸರಕುಸುಮವಿಕಾಸೇ

ಸ

ೀಮುಖಪಾಟಲಪಟಲಕೃತಸ್ಮರತೂಣವಿಲಾಸೇ. ವಿಹರತಿ॥ ಟೀ. ಮದನ-
ನ್ಮಥನೆಂಬ, ಮಹೀಪತಿ-ಮಹಾರಾಜನ, ಕನಕದಂಡ-ಚಿನ್ನದಕೋಲಿನ,
ಚಿ-ಕಾಂತಿಯಂತೆಕಾಂತಿಯುಳ್ಳ, ಕೇಸರಕುಸುಮ-ನಾಗಕೇಸರಪುಷ್ಪದ,
ಕಾಸ - ಅಲರೋಣವುಳ್ಳ, ಮಿಳಿತ- ಕೂಡಿಕೊಂಡಿರುವ, ಶಿಲೀಮುಖ-
ಂಬಿಗಳೆಂಬಬಾಣಗಳುಳ್ಳ, ಪಾಟಲ - ಪಾದರೀಪುಷ್ಪಗಳ, ಪಟಲ - ಸ
ೂಹದಿಂದ, ಕೃತ- ಮಾಡಲ್ಪಟ್ಟ, ಸ್ಮರ-ಮನ್ಮಥನ, ತೂಣ- ಬತ್ತಳಿ
ಯು, ವಿಲಾಸೆ-ವಿಭ್ರಮವುಳ್ಳ, ವಸಂತೆ-ವಸಂತಕಾಲದಲ್ಲಿ, ವಿಹರತಿ. ೩

ಪ. ಮೃಗಮದಸೌರಭರಭಸವಶಂವದನವದಳಮಾಲತಮಾಲೇ॥ ಯುವಜ
ಹೃದಯವಿದಾರಣಮನಸಿಜನಖರುಚಿಕಿಂಶುಕಜಾಲೇ. ವಿಹರತಿ॥ ಟೀ. ಮೃಗ
ದ-ಕಸ್ತೂರಿಯ, ಸೌರಭ- ವಾಸನೆಯ, ರಭಸ- ಅತಿಶಯಕ್ಕೆ, ವಶಂವ
-ಅಧೀನವಾದ, ನವದಳ-ಚಿಗುರೆಲೆಗಳ, ಮಾಲ-ಪರಂಪರೆಯುಳ್ಳ, ತ
ಮಾಲೆ- ಹೊಂಗೆವೃಕ್ಷಂಗಳುಳ್ಳ, ಯುವಜನ-ಯೌವನಸ್ಥರಾದ ಜನಗಳ,
ೃದಯ - ಮನಸ್ಸನ್ನು, ವಿದಾರಣ - ಸೀಳುತಲಿರುವ, ಮನಸಿಜ- ಮನ್ಮ
ನ, ನಖ- ಉಗುರ್ಗಳ, ರುಚಿ-ಕಾಂತಿಯಂತೆ ಕಾಂತಿಯುಳ್ಳ, ಕಿಂಶುಕ-
ುಳ್ಳುಮುತ್ತಗದಹೂವುಗಳ, ಜಾಲೆ-ಸಮೂಹವುಳ್ಳ, ವಸಂತೆ-ವಸಂತ
ಲದಲ್ಲಿ, ವಿಹರತಿ. ... ... ... ... ॥೪॥

ಪ. ವಿಗಳಿತಲಜ್ಜಿತಜಗದವಲೋಕನತರುಣಕರುಣಕೃತಹಾಸೇ॥ ವಿರಹಿನಿ
ೃಂತನಕುಂತಮುಖಾಕೃತಿಕೇತಕಿದಂತುರಿತಾಶೇ. ವಿಹರತಿ॥ ಟೀ. ವಿಗಳಿತ-
ೋಗಲಾಡಿಸಲ್ಪಟ್ಟ, ಲಜ್ಜಿತ-ನಾಚಿಕೆಯುಳ್ಳ, ಜಗತ್-ಲೋಕದ, ಅವ
ೂಕನ-ನೋಡೋಣದರಿಂದ, ತರುಣ-ನೂತನವಾದ, ಕರುಣ-ಕರುಣಪು
ಷ್ಪಗಳಿಂದ, ಕೃತ-ಮಾಡಲ್ಪಟ್ಟ, ಹಾಸೆ-ಹಾಸ್ಯವುಳ್ಳ, ವಿರಹಿ- ವಿರಹಿಜ
ನ್ನರ, ನಿಕೃಂತನ-ಕತ್ತರಿಸೋಣದರಲ್ಲಿ, ಕುಂತ-ಕುಂತವೆಂಬ ಆಯುಧದ,
ುಖ-ತುದಿಯ, ಆಕೃತಿ-ಆಕಾರದೋಪಾದಿಯಲ್ಲಿ ಆಕಾರವುಳ್ಳ, ಕೇತಕಿ-
ಾಳೆಪುಷ್ಪಗಳಿಂದ, ದಂತುರಿತ-ವ್ಯಾಪ್ತವಾದ, ಆಶೆ - ದಿಕ್ಕುಗಳುಳ್ಳ, ವ
ಸಂತೆ-ವಸಂತಕಾಲಗಳಲ್ಲಿ, ವಿಹರತಿ. ... ... ... ॥೫॥

ಪ. ಮಾಧವಿಕಾಪರಿಮಳಮಿಳಿತೆನವಮಲ್ಲಿಕಯಾತಿಸುಗಂಧೌ॥ ಮುನಿಮನ
ಮೋಹನಕಾರಿಣಿತರುಣಾಕಾರಣಬಂಧೌ. ವಿಹರತಿ॥ ಟೀ. ಮಾಧವಿ
ಕಾಪರಿಮಳಮಿಳಿತೆ, ಮಾಧವಿಕಾ- ಇರುವಂತಿಗೆಯುಳ್ಳ, ಪರಿಮಳ-
ವಾಸನೆಯಿಂದ, ಮಿಳಿತೆ - ಕೂಡಿರುವ, ನವಮಲ್ಲಿಕಯಾ. ನವ - ನೂತನ

ಪಾದ, ಮಲ್ಲಿಕಯಾ - ಮಲ್ಲಿಗೆಪುಷ್ಪದಿಂದ, ಅತಿಸುಗಂಧೌ - ಅತ್ಯಂತ
ಮಳವುಳ್ಳ, ಮುನಿಮನಸಾಮಪಿ - ಋಷಿಗಳ ಮನಸ್ಸುಗಳಿಗೂ ಕೂಡ
ಮೋಹನಕಾರಿಣಿ - ಮನ್ಮಥವಿಕಾರವನ್ನುಂಟುಮಾಡುತಲಿರುವ, ತರು
ಕಾರಣಬಂಧೌ, ತರುಣ-ಯೌವನಸ್ಥರಗಳಿಗೆ, ಅಕಾರಣ-ಕಾರಣವಿಲ್ಲ
ನೇ,ಬಂಧೌ-ಬಂಧುವಾಗಿರುವ, ವಸಂತೆ-ವಸಂತಕಾಲದಲ್ಲಿ, ವಿಹರತಿ.

ಪ. ಸ್ಫುರದತಿಮುಕ್ತಲತಾಪರಿರಂಭಣಮುಕುಳಿತಪುಳಕಿತಚೂತೆ॥ಬೃಂದಾವನವಿಪಿನೆಪರಿಸರಪರಿಗತಯಮುನಾಜಲಪೂತೆ. ವಿಹರತಿ॥ ಟೀ. ಸ್ಫುರ
ಪ್ರಕಾಶಿಸುತ್ತಲಿರುವ, ಅತಿಮುಕ್ತಲತಾ- ಇರುವಂತಿಗೆಬಳ್ಳಿಯ, ಪರಿರಂ
ಣ-ಆಲಿಂಗನದಿಂದ, ಮುಕುಳಿತ-ಮೊಗ್ಗುವಿಡಿದ, (ಆದಕಾರಣವೇ) ಪುಳ
ಕಿತವಾದ, ಚೂತೆ-ಮಾವಿನಮರಗಳುಳ್ಳ, (ಇರುವಂತಿ
ಳ್ಳಿಯಿಂಬಸ್ತ್ರೀಯಿಂ ಚೂತವೆಂಬ ಪುರುಷನು ಆಲಿಂಗಿಸಲ್ಪಟ್ಟನೆ
ದು ಸೂಚಿಸಲ್ಪಟ್ಟಿತು) ಪರಿಸರ-ಸಮೀಪದಲ್ಲಿ, ಪರಿಗತ_ ಸುತ್ತಿಕೊಂ
ರುವ, ಯಮುನಾ-ಕಾಳಿಂದಿಯ, ಜಲ-ನೀರಿನಿಂದ, ಪೂತೆ-ಪರಿಶುದ್ಧವಾ
ಬೃಂದಾವನವಿಪಿನೆ-ಬೃಂದಾವನವೆಂಬ ಕ್ರೀಡಾವನದಲ್ಲಿ, ವಿಹರತಿ.

ಪ. ಶ್ರೀಜಯದೇವಭಣಿತಮಿದಮುದಯತಿಹರಿಚರಣಸ್ಮೃತಿಸಾರಂ॥ ಸವಸಂತಸಮಯವನವರ್ಣನಮನುಗತಮದನವಿಕಾರಂ ವಿಹರತಿ. ಹರಿ
ರಸವಸಂತೆನೃತ್ಯತಿಯುವತಿಜನೇನಸಮಂಸಖಿವಿರಹಿಜನಸ್ಯದುರಂತೆ ವಿ
ಹರಿರಿಹಸರಸವಸಂತೆ. ಟೀ. ಸರಸ-ಶೃಂಗಾರರಸಯುಕ್ತವಾದ, ವಸಂತ
ಯ-ವಸಂತಕಾಲದ, ವನ-ಅರಣ್ಯದ, ವರ್ಣನಂ - ವರ್ಣನೆಯುಳ್ಳ,
ಚರಣಸ್ಮೃತಿಸಾರಂ, ಹರಿ-ಕೃಷ್ಣನ, ಚರಣ-ಪಾದಗಳ,ಸ್ಮೃತಿ-ಧ್ಯಾ
ನ, ಸಾರಂ- ಶ್ರೇಷ್ಠವಾದ, ಅನುಗತಮದನವಿಕಾರಂ, ಅನುಗತ -
ಸರಿಸಿರುವ, ಮದನವಿಕಾರಂ - ಮನ್ಮಥವಿಕಾರವುಳ್ಳ, ಶ್ರೀಜಯದೇ
ತಂ, ಶ್ರೀಜಯದೇವ - ಜಯದೇವನೆಂಬಕವಿಯಿಂದ, ಭಣಿತಂ - ಹೇಳಲ್ಪ
ಇದಂ-ಈ ಗೀತವು, ಉದಯತಿ-ಉಂಟಾಗುತ್ತಲಿಧೆ॥ ತಾ. ಈ
ರದಿಂ ನಾನಾವಿಧವಾದ ಪುಷ್ಪಗಳ ಪರಿಮಳದಿಂದಲೂ ಮಂದ ಮಾರು
ದಿಲೂ ಮನೋಹರವಾದ ವಸಂತ ಋತುವಿನೋಳ್ ಶ್ರೀಕೃ
ಬೃಂದಾವನವೆಂಬ ಕ್ರೀಡಾವನದಲ್ಲಿ ಗೋಪಿಕಾ ಸ್ತ್ರೀಯರುಗಳೊಡ
ಡಿ ಕ್ರೀಡಿಸುತ್ತಲಿಧಾನೆಂಬುದಂ ಓರ್ವ ಸಖಿಯು ರಾಧಾದೇವಿಯಂ
ತು ಹೇಳುತ್ತಿದ್ದಳು. ... ... ... ...

ಶ್ಲೋ॥ ದರವಿದಳಿತಮಲ್ಲೀವಲ್ಲಿಚಂಚತ್ಪರಾಗಪ್ರಕಟಿತಪಟವಾಸೈರ್ವಾಸ
ಯನ್ ಕಾನನಾನಿ। ಇಹಹಿಂದಹತಿ ಚೇತಃ ಕೇತಕೀಗಂಧಬಂಧುಃ ಪ್ರಸರದಸಮಬಾ
ಣಪ್ರಾಣವದ್ಗಂಧವಾಹಃ॥ ಸಖಿಯು ರಾಧೆಯಂ ಕುರಿತು ಪೇಳುತ್ತಾಳೆ.

ಟೀ. ದರವಿದಳಿತಮಲ್ಲೀವಲ್ಲಿಚಂಚತ್ಪರಾಗಪ್ರಕಟಿತಪಟವಾಸೈಃ, ದ
ರ-ಸ್ವಲ್ಪವಾಗಿ, ವಿದಳಿತ-ವಿಕಸಿಸಿರುವ, ಮಲ್ಲೀ-ಮಲ್ಲಿಗೆಯ, ವಲ್ಲಿ-ಬಳ್ಳಿ
ಗಳದೆಸೆಯಿಂದ, ಚಂಚತ್-ಚಲಿಸುತಲಿರುವ, ಪರಾಗ-ಪುಷ್ಪಧೂಳಿಗಳಿಂ
ದ, ಪ್ರಕಟಿತ-ಪ್ರಕಾಶವಾದಲ್ಪಟ್ಟ, ಪಟವಾಸೈಃ-ಗಂಧ ಹುಡಿಗಳಿಂದ,
ಕಾನನಾನಿ-ಅರಣ್ಯಗಳನ್ನು, ವಾಸಯನ್-ಪರಿಮಳಯುಕ್ತವಾಗಿ ಮಾಡು
ತಲಿರುವ ಕೇತಕೀ ಗಂಧಬಂಧುಃ, ಕೇತಕೀ-ತಾಳೆಹೂವಿನ, ಗಂಧ-ವಾಸ
ನೆಯು, ಬಂಧುಃ-ಬಂಧುವಾಗಿವುಳ್ಳ ಪ್ರಸರದಸಮಬಾಣಪ್ರಾಣವತ್, ಪ್ರ
ಸರತ್-ಸಂಚರಿಸುತಲಿರುವ, ಅಸಮಬಾಣ-ಮನ್ಮಥನ [illegible] ಪ್ರಾಣವತ್-ಪ್ರಾ
ಣವೋಯಂಬಂತಿರುವ, ಗಂಧವಾಹಃ-[illegible], ಇಹ-ಈ ವಸಂತಮಾ
ಸದಲ್ಲಿ, ಚೇತಃ [illegible] ದಹತಿ-ಸುಡುತಲಿಧೆಯಲ್ಲವೆ॥

ತಾ. ಎಲೈರಾಧೆಯೇ ಈ ವಸಂತಕಾಲದಲ್ಲಿ ಮನ್ಮಥನಿಗೆ ಪ್ರಿಯಮಿತ್ರ
ನಾದ ಮಲ್ಲಿಗೆ ಮೊದಲಾದ ಪುಷ್ಪಗಳ ಗಂಧದಿಂದೊಡಗೂಡಿದ ಮಂದಮಾ
ರುತವು ನಿನ್ನಂತಿಪ್ಪ ವಿರಹಿಜನಗಳಿಗೆ ಅತ್ಯಂತದುಃಖಕರವಾದ್ದಲ್ಲವೆ.

ಶ್ಲೋ॥ ಉನ್ಮೀಲನ್ಮಧುಗಂಧಲುಬ್ಧಮಧುಪವ್ಯಾಧೂತಚೂತಾಂಕುರ
ಕ್ರೀಡತ್ಕೋಕಿಲಕಾಕಲೀಕಲಕಲೈರುದ್ಗೀರ್ಣಕರ್ಣಜ್ವರಾಃ। ನೀಯಂತೆಪಥಿ
ಕೈಃಕಥಂಕಥಮಪಿಧ್ಯಾನಾವಧಾನಕ್ಷಣಪ್ರಾಪ್ತಪ್ರಾಣ ಸಮಾಸಮಾಗಮ
ರಸೋಲ್ಲಾಸೈರಮೀವಾಸರಾಃ॥ ಟೀ. ಉನ್ಮೀಲತ-ಉಂಟಾಗುತಲಿರುವ, ಮ
ಧು-ಮಕರಂದದ, ಗಂಧ-ವಾಸನೆಯಲ್ಲಿ, ಲುಬ್ಧ-ಆಸಕ್ತವಾದ, ಮಧುಪ-
ದುಂಬಿಗಳಿಂದ, ವ್ಯಾಧೂತ-ಅಲ್ಲಾಡಿಸಲ್ಪಟ್ಟ, ಚೂತಾಂಕುರ-ಮಾವಿನತಳಿ
ರುಗಳಲ್ಲಿ, ಕ್ರೀಡತ್-ಕ್ರೀಡಿಸುತಲಿರುವ, ಕೋಗಿಲ-ಕೋಗಿಲೆಗಳ, ಕಾಕ
ಲೀ-ಕಿವಿಗಿಂಪಾದ ಸೂಕ್ಷ್ಮಧ್ವನಿಗಳ, ಕಲಕಲೈಃ-ಕೋಲಾಹಲಗಳಿಂದ ಉ
ದ್ಗೀರ್ಣಕರ್ಣಜ್ವರಾಃ, ಉದ್ಗೀರ್ಣ-ಉಂಟುಮಾಡಲ್ಪಟ್ಟ, ಕರ್ಣಜ್ವರಾಃ-
ಶ್ರೋತ್ರವ್ಯಥೆಯುಳ್ಳ, ಅಮೀ-ಈ ವಸಂತಋತು ಸಂಬಂಧಿಗಳಾದ, ವಾ
ಸರಾಃ-ದಿವಸಗಳು, ಧ್ಯಾನಾವಧಾನಕ್ಷಣಪ್ರಾಪ್ತಪ್ರಾಣಸಮಾಸಮಾಗಮ
ರಸೋಲ್ಲಾಸೈಃ, ಧ್ಯಾನ-ಸ್ಮರಣೆಗೋಸ್ಕರ ವುಂಟಾದ, ಅವಧಾನ-ಚಿತ್ತಸ್ವಾ
ಸ್ಥ್ಯದ, ಕ್ಷಣ-ಕಾಲದಲ್ಲಿ, ಪ್ರಾಪ್ತ-ಹೊಂದಲ್ಪಟ್ಟ, ಪ್ರಾಣಸಮಾ-ಪ್ರಾ

ಣಕಾಂತೆಯರ, ಸಮಾಗಮರಸ-ಸಂಭೋಗರಸದಿಂದುಂಟಾದ, ಉಲ್ಲಾಸ್ಯ-ಸಂತೋಷವುಳ್ಳ, ಪಥಿಕೈಃ-ಮಾರ್ಗಸ್ಥರುಗಳಿಂದ, ಕಥಂಕಥಮಪಿ-ಅತ್ಯಂತಪ್ರಯಾಸದಿಂದ, ನೀಯಂತೆ-ಕಳೆಯಲ್ಪಡುತ್ತಲಿವೆ॥ ತಾ॥ ವಿರಹಿಜನಂಗಳು ಮಧುರವಾದ ಕೋಗಿಲೆಯ ಕೂಗುಗಳಿಂ ದುಃಖಕರವಾದ ವಸಂತಸಮಯ ದಿವಸಗಳೊಳ್ ತಮ್ಮತಮ್ಮ ಪ್ರಾಣಕಾಂತೆಯರ ಸುರತ ಸುಖವಂಸ್ಮರಿಸುತ ಅತಿಪ್ರಯಾಸದಿಂ ಕಾಲವಂ ಕಳೆಯುತಲಿಧಾರೆ. ೧೦॥

ಶ್ಲೋ॥ ಅನೇಕನಾರೀಪರಿರಂಭಸಂಭ್ರಮಸ್ಫುರನ್ಮನೋಹಾರಿವಿಲಾಸಲಾಲಸಂ॥ ಮುರಾರಿಮಾರಾದುಪದರ್ಶಯಂತ್ಯಸೌ ಸಖೀಸಮಕ್ಷಂ ಪುನರಾಹರಾಧಿಕಾಂ॥ ಟೀ॥ ಅಸೌಸಖೀ-ಈ ಸಖಿಯು, ಅನೇಕನಾರೀ-ಅನೇಕಸ್ತ್ರೀರಗಳ ಪರಿರಂಭ-ಆಲಿಂಗನದ ಸಂಭ್ರಮತ್ವರೆಯಿಂದ, ಸ್ಫುರತ್-ಪ್ರಕಾಶಿಸು[illegible]ಮನೋಹರವಾದ, ವಿಲಾಸ-ಕ್ರೀಡೆಯಲ್ಲಿ, ಲಾಲ[illegible]ಲಿಸುತ್ತಿರುವ, ಮುರಾರಿಂ-ಶ್ರೀಕೃಷ್ಣನನ್ನು, ಆರಾತ್-ಸಮೀಪದಲ್ಲಿ, ಸಮಕ್ಷಂ-ಎದುರಾಗಿ, ಉಪದರ್ಶಯಂತಿ-ತೋ[illegible]ತೋರಿಸುವಳಾಗಿ, ಪುನಃ-ಮತ್ತು, ರಾಧಿಕಾಂ-ರಾಧೆಯುಂಕುರಿತು ಆಹ-ಹೇಳಿದ[illegible] ಶ್ರೀಕೃಷ್ಣನ ವಿರಹದಿಂ ಸಂತಾಪವಂ ಪೊಂದಿರುವ ರಾಧಾದೇವಿಗೆ ಅನೇಕ ಗೋಪಿಕಾಸ್ತ್ರೀಗಳೊಡನೆ ಕ್ರೀಡಿಸುತಲಿರುವ ಕೃಷ್ಣನಂ ಪ್ರತ್ಯಕ್ಷವಲ್ಲೆ ತೋರಿಸಿ ಕೆಳದಿಯು-ಒಂದಾನೊಂದು ನುಡಿಯಂನುಡಿಯುತಲಿಧಾಳೆ. ೧೧

## ಚತುರ್ಥಾಷ್ಟಪದಿ ಪ್ರಾರಂಭಃ.

ಪ॥ ಚಂದನಚರ್ಚಿತನೀಲಕಳೇಬರಪೀತವಸನವನಮಾಲೀ॥ ಕೇಳಿಚಲನ್ಮಣಿಕುಂಡಲಮಂಡಿತಗಂಡಯುಗಸ್ಮಿತಶಾಲೀ ॥ಪ॥ ಹರಿರಿಹಮುಗ್ಧವಧೂನಿಕರೇ । ವಿಲಾಸಿನಿವಿಲಸತಿಕೇಳಿಪರೇ।ಹರಿರಿಹಮುಗ್ಧವಧೂನಿಕರೇ॥ ಟೀ॥ ಹೇವಿಲಾಸಿನಿ-ಎಲೈ ವಿಲಾಸವತಿಯಾದ ರಾಧೆಯೆ, ಚಂದನ-ಶ್ರೀಗಂಧದಿಂದ, ಚರ್ಚಿತ-ಲೇಪಿಸಲ್ಪಟ್ಟ, ನೀಲ-ಶ್ಯಾಮಳವಾದ, ಕಳೇಬರ-ಶರೀರವುಳ್ಳ, ಪೀತ-ಹೊಂಬಣ್ಣವಾದ ವಸನ-ವಸ್ತ್ರವುಳ್ಳ, ವನಮಾಲೀ-ತುಲಸೀಮಾಲೆಯಂ ಧರಿಸಿರುವ, ಕೇಳಿ-ಕ್ರೀಡೆಯಿಂದ, ಚಲತ್-ಚಲಿಸುತಲಿರುವ, ಮಣಿಕುಂಡಲ-ರತ್ನಕುಂಡಲಗಳಿಂದ, ಮಂಡಿತ-ಅಲಂಕರಿಸಲ್ಪಟ್ಟ, ಗಂಡಯುಗ-ಕಪೋಲದ್ವಯವುಳ್ಳ, ಸ್ಮಿತ-ಮಂದಹಾಸದಿಂ, ಶಾಲೀ-ಪ್ರಕಾಶಿಸುತಲಿರುವ, ಹರಿಃ-ಶ್ರೀಕೃಷ್ಣನು, ಇಹ-ಈ ಪ್ರದೇಶದಲ್ಲಿ ಕೇಳಿಪರೇ, ಕೇಳಿ-ಕ್ರೀಡೆಯಲ್ಲಿ, ಪರೇ-ಆಸಕ್ತವಾದ ಮುಗ್ಧವಧೂನಿಕರೇ, ಮುಗ್ಧವಧೂ-ಸಮ್ಮೋಹಸ್ತ್ರೀಯರುಗಳ, ನಿ

ಕರ-ಸಮೂಹದಲ್ಲಿ ವಿಲಸತಿ-ಪ್ರಕಾಶಿಸುತಲಿಧಾನೆ. ೧

ಪ॥ ಪೀನಪಯೋಧರಭಾರಭರೇಣಹರಿಂಪರಿರಭ್ಯಸರಾಗಂಗೋಪವಧೂರನುಗಾಯತಿಕಾಚಿದುದಂಚಿತಪಂಚಮರಾಗಂ ಹರಿರಿಹಮುಗ್ಧವಧೂನಿಕರೇ. ಟೀ॥ ಕಾಚಿತ್‌ಗೋಪವಧೂಃ-ಒಂದಾನೊಂದು ಗೋಪಿಕಾಸ್ತ್ರೀಯು, ಸರಾಗಂಯಥಾತಥಾ-ಪ್ರೀತಿಯೊಡನೆ ಕೂಡಿಕೊಂಡಿರೋಣ ಹಾಗೋಹಾಗೆ ಪೀನಪಯೋಧರಭಾರಭರೇಣ, ಪೀನ-ದಪ್ಪವಾದ, ಪಯೋಧರ-ಸ್ತನಗಳ ಭಾರಭರೇಣ-ಭಾರಾಧಿಕ್ಯದಿಂದ, ಹರಿಂ-ಕೃಷ್ಣನನ್ನು, ಪರಿರಭ್ಯ-ಅಪ್ಪಿಕೊಂಡು ಉದಂಚಿತಪಂಚಮರಾಗಂ, ಉದಂಚಿತ-ಎತ್ತರಿಸಲ್ಪಟ್ಟ, ಪಂಚಮರಾಗಂಯಥಾತಥಾ-ಪಂಚಮಸ್ವರವುಳ್ಳೋಣ ಹ್ಯಾಗೋಹಾಗೆ, ಅನುಗಾಯತಿ-ಅನುಸರಿಸಿಗಾನವಂ ಮಾಡುತಲಿಧಾಳೆ.

ಪ॥ ಕಾಪಿವಿಲಾಸವಿಲೋಲವಿಲೋಚನಖೇಲನಜನಿತಮನೋಜಂ॥ಧ್ಯಾಯತಿ ೨
ಮುಗ್ಧವಧೂರಧಿಕಂ ॥ ಮಧುಸೂದನವದನಸರೋಜಂ॥ಹರಿರಿಹ॥ ಟೀ॥ ಕಾಪಿ-ಒಂದಾನೊಂದು, ಮುಗ್ಧವಧೂಃ-ಸಪ್ರೌಢಳಾದ ತರುಣಿಯು, ವಿಲಾಸ-ಲೀಲೆಯಿಂದ, ವಿಲೋಲ-ಚಂಚಲವಾದ, ವಿಲೋಚನ-ನೇತ್ರಗಳ, ಖೇಲನ-ಕ್ರೀಡೆಯಿಂದ, ಜನಿತ-ಉಂಟುಮಾಡಲ್ಪಟ್ಟ, ಮನೋಜಂ-ಮನ್ಮಥನುಳ್ಳ ಮಧುಸೂದನ-ಶ್ರೀಕೃಷ್ಣನ, ವದನಸರೋಜಂ-ಮುಖಕಮಲವನ್ನು, ಧ್ಯಾಯತಿ-ನೋಡುತಲಿಧಾಳೆ.

ಪ॥ ಕಾಪಿಕಪೋಲತಲೇಮಿಳಿತಾಲಪಿತುಂಕಿಮಪಿಶ್ರುತಿಮೂಲೇಚಾರುಚು ೩
ಚುಂಬನಿತಂಬವತೀದಯಿತಂಪುಲಕೈರನುಕೂಲೇ. ಹರಿರಿಹ॥ ಟೀ॥ ಕಾಪಿನಿತಂಬವತೀ- ಗುರುನಿತಂಬವುಳ್ಳ ಒಂದಾನೊಂದು ತರುಣಿಯು, ಕಿಮಪಿ_ಒಂದಾನೊಂದು ವಾರ್ತೆಯಂ, ಆಲಪಿತುಂ-ಪೇಳಲೋಸುಗ ಶ್ರುತಿಮೂಲೇ, ಶ್ರುತಿ-ಕಿವಿಗಳ, ಮೂಲೆ-ಮೂಲ ಪ್ರದೇಶದಲ್ಲಿ, ಮಿಳಿತಾ-ಶೇರಿಕೊಂಡವಳಾಗಿ, ಪುಲಕೈಃ-ರೋಮಾಂಚಗಳಿಂದ, ಅನುಕೂಲೆ-ಕೂಡಿರುವ, ಕಪೋಲತಲೆ-ಗಂಡಸ್ಥಳದಲ್ಲಿ, ಚಾರು-ಮನೋಹರವಾಗಿರೋಣ ಹಾಗೋಹಾಗೆ, ಚುಚುಂಬ-ಮುತ್ತಿಟ್ಟಳು.

ಪ॥ ಕೇಳಿಕಲಾಕುತುಕೇನಚಕಾಚಿದಮುಂಯಮುನಾವನಕೂಲೇ॥ ಮಂಜು ೪
ಳವಂಜುಳಕುಂಜಗತಂವಿಚಕರ್ಷಕರೇಣದುಕೂಲೇ ಹರಿರಿಹ॥ಟೀ॥ ಕಾಚಿತ್-ಒಂದು ಗೋಪಿಕಾಸ್ತ್ರೀಯು ಯಮುನಾವನಕೂಲೆ, ಯಮುನಾ-ಕಾಳಿಂದಿಯ, ವನ-ಅರಣ್ಯದ, ಕೂಲೆ-ತೀರದಲ್ಲಿ ಮಂಜುಳವಂಜುಳಕುಂಜಗತಂ, ಮಂ

ಟ್ಟು, ಇದಂ- ಈ ಗೀತವು, ಶುಭಾನಿ-ಮಂಗಳವನ್ನು, ವಿತನೋತು- ಉಂಟು ಮಾಡಲಿ॥ ತಾ. ಈಪರಿಯಿಂ ಬೃಂದಾವನದಲ್ಲಿ ಅನೇಕ ಗೋಪಿಕಾಂಗನೆಯರೊಡಗೂಡಿ ನಾನಾವಿಧವಾದ ಕ್ರೀಡಾ ಚಮತ್ಕಾರಗಳಂ ಮಾಡುತಲಿರುವ ಶ್ರೀಕೃಷ್ಣನಂ ಕೃಷ್ಣನವಿರಹದಿಂದಲೆ ಹಂಬಲಿಸುತಲಿರುವ ರಾಧೆಗೆ ಓರ್ವಸಖಿಯು ಪ್ರತ್ಯಕ್ಷದಲ್ಲಿ ತೋರಿಸುತಲಿಧಾಳೆ. ... ... ॥೮॥

ಶ್ಲೋ॥ವಿಶ್ವೇಷಾಮನುರಂಜನೇನಜನಯನ್ನಾನಂದಮಿಂದೀವರಶ್ರೇಣೀಶ್ಯಾಮಲಕೋಮಲೈರುಪನಯನ್ನಂಗೈರನಂಗೋತ್ಸವಂ। ಸ್ವಚ್ಛಂದಂವ್ರಜಸುಂದರೀಭಿರಭಿತಃಪ್ರತ್ಯಂಗಮಾಲಿಂಗಿತಃಶೃಂಗಾರಸ್ಸಖಿಮೂರ್ತಿಮಾನಿವಮಧೌಮುಗ್ಧೋಹರಿಃಕ್ರೀಡತಿ. ಟೀ. ಹೇಸಖಿ-ಎಲೈರಾಧೆಯೆ, ಅನುರಂಜನೇನ-ಪ್ರೀತಿಯಂಪುಟ್ಟಿಸೋಣದರಿಂದ, ವಿಶ್ವೇಷಾಂ-ಪ್ರಪಂಚಗಳಿಗೆ, ಆನಂದ-ಸಂತೋಷವನ್ನು, ಜನಯನ್-ಉಂಟುಮಾಡುತಲಿರುವ, ಇಂದೀವರಶ್ರೇಣೀಶ್ಯಾಮಲಕೋಮಲೈಃ- ಇಂದೀವರ-ಕನ್ನೈದಿಲೆಹೂವುಗಳ, ಶ್ರೇಣೀ-ಪಙ್ಕ್ತಿಯೋಪಾದಿಯಲ್ಲಿ, ಶ್ಯಾಮಲ-ಕಪ್ಪಾದ, ಕೋಮಲೈಃ-ಮೃದುವಾದ, ಅಂಗೈಃ-ಅವಯವಗಳಿಂದ, ಅನಂಗೋತ್ಸವಂ,ಅನಂಗ-ಮನ್ಮಥನ, ಉತ್ಸವಂ-ಉತ್ಸವವನ್ನು, ಉಪನಯನ್- ಹೊಂದಿಸುತಲಿರುವ, ವ್ರಜಸುಂದರೀಭಿಃ-ಗೋಪಾಂಗನೆಯರುಗಳಿಂದ, ಅಭಿತಃ-ಸುತ್ತಲೂ, ಸ್ವಚ್ಛಂದಂ-ಮನಸ್ಸುಬಂದಂತೆ, ಪ್ರತ್ಯಂಗಂ- ಪ್ರತಿಶರೀರದಲೂ, ಆಲಿಂಗಿತಃ-ಅಪ್ಪಿಕೊಳ್ಳಲ್ಪಟ್ಟು, ಮುಗ್ಧಃ-ಸುಂದರನಾದ, ಹರಿಃ-ಕೃಷ್ಣನು, ಮೂರ್ತಿಮಾನ್- ಶರೀರದಿಂಕೂಡಿರುವ, ಶೃಂಗಾರಇವ-ಶೃಂಗಾರ ರಸವೋಪಾದಿಯಲ್ಲಿ, ಮಧೌ-ವಸಂತಋತುವಿನಲ್ಲಿ, ಕ್ರೀಡತಿ- ಆಡುತಲಿಧಾನೆ. ತಾ. ನೀಲಮೇಘಶ್ಯಾಮನಾದ ಶ್ರೀಕೃಷ್ಣನು ಗೋಪಿಕಾ ಸ್ತ್ರೀರಗಳಿಂದೊಡಗೂಡಿ ಶರೀರವಂಪೊಂದಿ ಬಂದಿರುವ ಶೃಂಗಾರ ರಸವೋ ಯೆಂಬಂತೆ ವಸಂತ ಕಾಲದೊಳ್ ರಮಿಸುತಲಿಧಾನೆ. ... ... ... ॥೧೧॥

ಶ್ಲೋ॥ಅದ್ಯೋತ್ಸಂಗವಸದ್ಭುಜಂಗಕಬಳಕ್ಲೇಶಾದಿವೇಚಲಂಪ್ರಾಲೇಯಪ್ಲವನೇಛಯಾನುಸರತಿಶ್ರೀಖಂಡಶೈಲಾನಿಲಃ॥ಕಿಂಚಿತ್ಸ್ನಿಗ್ಧರಸಾಲಮೌಳಿಮುಕುಳಾನ್ಯಾಲೋಕ್ಯ ಹರ್ಷೋದಯಾದುನ್ಮೀಲಂತಿಕುಹೂಃ ಕುಹೂರಿತಿಕಲೋತ್ತಾಲಾಃಪಿಕಾನಾಂಗಿರಃ॥ ಇತಿಗೀತಗೋವಿಂದಪ್ರಥಮಸ್ಸರ್ಗಸಮಾಪ್ತಃ

ಟೀ. ಅದ್ಯ- ಈ ವಸಂತಕಾಲದಲ್ಲಿ, ಶ್ರೀಖಂಡಶೈಲಾನಿಲಃ, ಶ್ರೀಖಂಡಶೈಲ - ಮಲಯಪರ್ವತದ, ಅನಿಲಃ - ಮಾರುತವು, ಉತ್ಸಂಗವಸದ್ಭುಜಂ

ಗಕಬಳಕ್ಲೇಶಾತ್.ಉತ್ಸಂಗ-ಸಮೀಪದಲ್ಲಿ, ವಸತ್- ವಾಸಮಾಡುತಲಿರುವ, ಭುಜಂಗ-ಸರ್ಪಗಳಿಗೆ, ಕಬಳ-ಆಹಾರ ವಾಗಿರೋಣದರಿಂದುಂಟಾದ, ಕ್ಲೇಶಾತ್-ವ್ಯಥೆದೆಸೆಯಿಂದ, ಪ್ರಾಲೇಯಪ್ಲವನೇಚ್ಛಯೇವ- ಪ್ರಾಲೇಯ--ಮಂಜುಗಳಲ್ಲಿ, ಪ್ಲವನೇಚ್ಛಯೇವ- ಮುಳುಗಲಿಚ್ಛೆಯಿಂದಲೊಯೆಂಬಹಾಗೆ, ಈಶಾಚಲಂ-ಕೈಲಾಸಪರ್ವತವನ್ನು, ಅನುಸರತಿ-ಹೊಂದುತಲಿಧೆ, ಕಿಂಚಿತ್-ಸ್ವಲ್ಪವಾಗಿ, ಸ್ನಿಗ್ಧ-ನುಣುಪಾದ, ರಸಾಲ-ಮಾವಿನಮರಗಳ, ಮೌಳಿ-ತುದಿಯಲ್ಲಿರುವ, ಮುಕುಳಾನಿ-ಮೊಗ್ಗುಗಳನ್ನು, ಆಲೋಕ್ಯ-ನೋಡಿ, ಹರ್ಷೋದಯಾತ್-ಹರ್ಷ-ಸಂತೋಷದ, ಉದಯಾತ್-ಉತ್ಪತ್ತಿದೆಸೆಯಿಂದ, ಕಲೋತ್ತಾಲಾಃ- ಅವ್ಯಕ್ತಮಧುರವಾದ, ಉತ್ತಾಲಾಃ-ಉತ್ತರಸ್ವರಗಳಲ್ಲಿ, ಪಿಕಾನಾಂ-ಕೋಗಿಲೆಗಳ, ಗಿರಃ-ವಾಕ್ಯಗಳು, ಕುಹೂಃಕುಹೂರಿತಿ, ಕುಹೂಃ-ಕುಹೂಃಯೆಂಬದಾಗಿ, ಉನ್ಮೀಲಂತಿ-ವೃದ್ಧಿಹೊಂದುತಲಿವೆ.

ತಾ. ವಸಂತಕಾಲದೊಳು ದಕ್ಷಿಣದಿಕ್ಕಿನ ದೆಸೆಯಿಂದ ಉತ್ತರದಿಕ್ಕಿಗೆ ತಂಬೆಲರ್ತೆರಗಳುತಲಿಧೆ, ಮತ್ತು ಕೋಗಿಲೆಗಳು ಮಾವಿನಮರದ ಚಿಗುರನ್ನೋಡಿ ಸಂತೋಷದಿಂ ಕೂಗುತಲಿವೆ. ... ... ॥೧೨॥

ಗೀತಗೋವಿಂದವೆಂಬ ಮಹಾಕಾವ್ಯದೊಳ್ ಪ್ರಥಮಸ್ಸರ್ಗ ಸಂಪೂರ್ಣವು.

ಶ್ಲೋ॥ ವಿಹರತಿವನೇರಾಧಾಸಾಧಾರಣಪ್ರಣಯೇಹರೌವಿಗಳಿತನಿಜೋತ್ಕರ್ಷಾದೀರ್ಷ್ಯಾವಶೇನಗತಾನ್ಯತಃ॥ ಕ್ವಚಿದಪಿಲತಾಕುಂಜೇಗುಂಜನ್ಮಧುವ್ರತಮಂಡಲೀಮುಖರಶಿಖರೇಲೀನಾದೀನಾಪ್ಯಾಹರಹಸ್ಸಖೀಂ॥ ಟೀ. ಹರೌ-ಶ್ರೀಕೃಷ್ಣನು, ಸಾಧಾರಣಪ್ರಣಯೇ-ಸಾಧಾರಣ- ಸಮಸ್ತಗೋಪಸ್ತ್ರೀಯಗಳಲ್ಲೂ ಒಂದೆವಿಧವಾದ, ಪ್ರಣಯೇ-ಪ್ರೀತಿವುಳ್ಳವನಾಗಿ, ವನೇ-ಬೃಂದಾವನದಲ್ಲಿ, ವಿಹರತಿಸತಿ-ಕ್ರೀಡಿಸುತ್ತಿರಲಾಗಿ, ವಿಗಳಿತನಿಜೋತ್ಕರ್ಷಾತ್- ವಿಗಳಿತ- ಹೋಗಲಾಡಿಸಲ್ಪಟ್ಟ, ನಿಜೋತ್ಕರ್ಷಾತ್ - ತನ್ನ ಬಹುಮಾನದದೆಸೆಯಿಂದ, ಈರ್ಷ್ಯಾವಶೇನ - ಈರ್ಷ್ಯಾ - ಅಸೂಯೆಯು, ವಶೇನ -- ಅಧೀನದಿಂದ, ಅನ್ಯತಃ - ಮತ್ತೊಂದು ಕಡೆಯನ್ನು, ಗತಾ-ಹೊಂದಿರುವ, ರಾಧಾ-ರಾಧೆಯು, ಗುಂಜನ್ಮಧುವ್ರತಮಂಡಲೀಮುಖರಶಿಖರೇ-ಗುಂಜತ್-ಝೇಂಕಾರಮಾಡುತಲಿರುವ, ಮಧುವ್ರತ-- ತುಂಬಿಗಳಮಂಡಲೀ-- ಗುಂಪಿನಿಂದ, ಮುಖರ - ಶಬ್ದಯುಮಾನವಾದ, ಶಿಖರ-ತುದಿಯುಳ್ಳ, ಕ್ವಚಿದಪಿ-ಯಲೊಲ್ಲೊಂದುಕಡೆಯಲ್ಲಿರುವ, ಲತಾಕುಂಜೇ- ಬಳ್ಳಿಯಮನೆಯಲ್ಲಿ, ಲೀನಾಸತೀ - ಅಡಗಿಕೊಂಡವಳಾಗಿ, ದೀನಾಪಿ - ದೈನ್ಯವುಳ್ಳಂಥಾವಳಾದರೂ

ರಹಃ-ಏಕಾಂತದಲ್ಲಿ, ಸಖೀಂ-ಸಖಿಯಂ, ಕುರಿತು, ಉವಾಚ-ಮಾತನಾಡಿದ
ಳು॥ ತಾ. ರಾಧಾದೇವಿಯು ಗೋಪಿಕಾ ಸ್ತ್ರೀಯರಗಳೊಡನೆ ಕ್ರೀಡಿಸುತಲಿ
ರುವ ಶ್ರೀಕೃಷ್ಣನಂ ನೋಡಿ ಅಸೂಯೆಯಿಂದೊಂದಾನೊಂದು ಲತಾ
ಮಂಟಪಮಂಪೊಂದಿ ಅತ್ಯಂತದೈನ್ಯದಿಂಕೂಡಿ ತನ್ನ ಕೆಳದಿಯಂ ಕುರಿತಿಂ
ತೆಂದಳು. ... ... ... ... ॥೧೩॥

ಪಂಚಮಾಷ್ಟಪದಿ ಪ್ರಾರಂಭಃ. ರಾಗ-ದೇಶಾಕ್ಷರಿ.

ಪ. ಸಂಚಲದಧರಸುಧಾಮಧುರಧ್ವನಿಮುಖರಿತಮೋಹನವಂಶಂ॥ಚಲಿತದೃ
ಗಂಚಲಚಂಚಲಮೌಳಿಕಪೋಲವಿಲೋಲವತಂಸಂರಾಸೆ॥ಹರಿಮಿಹವಿಹಿತವಿಲಾ
ಸಂಸ್ಮರತಿಮನೋಮಮಕೃತಪರಿಹಾಸಂ ॥ ರಾಸೆಹರಿಮಿಹವಿಹಿತವಿಲಾಸಂ॥
ಟೀ, ಸಂಚಲತ್ - ಚಲಿಸುತಲಿರುವ, ಅಧರ - ತುಟಿಯ, ಸುಧಾ-ಅಮೃ
ತದಿಂದ, ಮಧುರ-ಕಿವಿಗಿಂಪಾದ, ಧ್ವನಿ-ಧ್ವನಿಯಿಂದ, ಮುಖರಿತ-ಶಬ್ದಾಯ
ಮಾನವಾಗಿ, ಮಾಡಲ್ಪಟ್ಟ, ಮೋಹನ-ಮೋಹಕರವಾದ, ವಂಶಂ-ಕೊಳ
ಲುಳ್ಳ, ಚಲಿತ-ಸಂಚರಿಸುತಲಿರುವ, ದೃಕ್-ಕಣ್ಣುಗಳ, ಅಂಚಲ-ತುದಿಯು
ಳ್ಳೊಣ ಹ್ಯಾಗೋಹಾಗೆ, ಚಂಚಲ-ಕಂಪಿಸುತಲಿರುವ, ಮೌಳಿ-ಶಿರಸ್ಸು
ವನಾದಕಾರಣವೆ, ಕಪೋಲ-ಕೆನ್ನೆಯಲ್ಲಿ, ವಿಲೋಲ - ಜೋಲಾಡುತ್ತಿರು
ವ, ವತಂಸಂ-ಕರ್ಣಾವತಂಸವುಳ್ಳಂಥ, ರಾಸೆ-ರಾಸಕ್ರೀಡೆಯಲ್ಲಿ, ವಿಹಿತ
ವಿಲಾಸಂ, ವಿಹಿತ-ಮಾಡಲ್ಪಟ್ಟ, ವಿಲಾಸಂ-ಲೀಲೆಯುಳ್ಳ, ಕೃತಪರಿಹಾಸಂ
ಕೃತ- ಮಾಡಲ್ಪಟ್ಟ, ಪರಿಹಾಸಂ - ಮುಗುಳ್ನಗೆಯುಳ್ಳ, ಹರಿಂ - ಶ್ರೀಕೃ
ಷ್ಣನನ್ನು, ಮಮ-ನನ್ನ, ಮನಃ-ಮನಸ್ಸು, ಇಹ-ಈಸ್ಥಳದಲ್ಲಿ, ಸ್ಮರತಿ-
ಸ್ಮರಿಸುತಲಿದೆ. ... ... ... ॥೧॥
ಪ. ಚಂದ್ರಕಚಾರುಮಯೂರಶಿಖಂಡಕಮಂಡಲವಲಯಿತಕೇಶಂ॥ಪ್ರಚು
ರಪುರಂದರಧನುರನುರಂಜಿತಮೇದುರಮುದಿರಸುವೇಷಂ. ರಾಸೆ॥ ಟೀ. ಚಂ
ದ್ರಕ-ಹೀಲಿಕಗಣ್ಣುಗಳಿಂದ, ಚಾರು-ಮನೋಹರವಾದ ಮಯೂರ-ನವಿಲು
ಗಳ, ಶಿಖಂಡಕ-ಗರಿಗಳ, ಮಂಡಲ-ಸಮೂಹದಿಂದ, ವಲಯಿತ- ಸುತ್ತಲ್ಪ
ಟ್ಟ, ಕೇಶಂ-ಕೂದಲುಗಳುಳ್ಳ, ಪ್ರಚುರ-ಪ್ರಶಸ್ತವಾದ, ಪುರಂದರಧನುಃ-
ಇಂದ್ರಚಾಪದಿಂದ, ಅನುರಂಜಿತ-ಅಲಂಕರಿಸಲ್ಪಟ್ಟ, ಮೇದುರ-ದಟ್ಟವಾದ,
ಮುದಿರ-ಮೇಘದೋಪಾದಿಯಲ್ಲಿ, ಸು-ಶೋಭನವಾದ, ವೇಷಂ-ಅಲಂಕಾ
ರವುಳ್ಳ, ಹರಿಂ-ಕೃಷ್ಣನನ್ನು, ಸ್ಮರತಿ-ಸ್ಮರಿಸುತಲಿದೆ ... ॥೨॥
ಪ. ಗೋಪಕದಂಬನಿತಂಬವತೀಮುಖಚುಂಬನಲಂಭಿತಲೋಭಂ॥ ಬಂಧು

ಜೀವಮಧುರಾಧರಪಲ್ಲವಕಲಿತದರಸ್ಮಿತಶೋಭಂ. ರಾಸೆ॥ ಟೀ. ಗೋಪಕ
ದಂಬ-ಗೊಲ್ಲರಸಮೂಹದ, ನಿತಂಬವತೀ- ಕಾಮಿನೀಯರ, ಮುಖ-ಮುಖ
ವನ್ನು, ಚುಂಬನ-ಮುತ್ತಿಕ್ಕೋಣದರಲ್ಲಿ, ಲಂಭಿತ-ಹೊಂದಲ್ಪಟ್ಟ, ಲೋ
ಭಂ - ಆಶೆಯುಳ್ಳ, ಬಂಧುಜೀವ- ಬಂದುಗೆಹೂವಿನೋಪಾದಿಯಲ್ಲಿ, ಮಧು
ರ-ಮನೋಹರವಾದ, ಅಧರಪಲ್ಲವ - ತಳಿರಂತಿರುವತುಟಿಯಿಂದ, ಕಲಿತ-
ಮಾಡಲ್ಪಟ್ಟ, ದರಸ್ಮಿತ-ಮುಗುಳ್ನಗೆಯಿಂ, ಶೋಭಂ - ಕಾಂತಿಯುಳ್ಳ,
ಹರಿಂ-ಶ್ರೀಕೃಷ್ಣನಂ, ಸ್ಮರತಿ-ಸ್ಮರಿಸುತಲಿಧೆ. ... ॥೩॥

ಪ. ವಿಪುಲಪುಲಕಭುಜಪಲ್ಲವವಲಯಿತವಲ್ಲವಯುವತಿಸಹಸ್ರಂ॥ಕರಚರ
ಣೋರಸಿಮಣಿಗಣಭೂಷಣಕಿರಣವಿಭಿನ್ನತಮಿಸ್ರಂ. ರಾಸೆ॥ ಟೀ. ವಿಪುಲ-
ವಿಸ್ತಾರವಾದ, ಪುಲಕ-ರೋಮಾಂಚವುಳ್ಳ, ಭುಜಪಲ್ಲವ-ಚಿಗರಿನಂತೆ,ಮೃ
ದುವಾದತೋಳುಗಳಿಂದ, ವಲಯಿತ- ಸುತ್ತಿಕೊಳ್ಳಲ್ಪಟ್ಟ, ವಲ್ಲವಯುವತಿ-
ಗೊಲ್ಲಸ್ತ್ರೀರಗಳ, ಸಹಸ್ರಂ- ಸಾವಿರಗಳುಳ್ಳ, ಕರಚರಣೋರಸಿ, ಕರ-
ಹಸ್ತಗಳನು, ಚರಣ-ಪಾದಗಳನು, ಉರಸಿ- ವಕ್ಷಸ್ಥಲವನು, ಇವುಗಳಲ್ಲಿ
ರುವ, ಮಣಿ-ರತ್ನಗಳ, ಗಣ-ಸಮೂಹದ, ಭೂಷಣ-ಒಡವೆಗಳ,ಕಿರಣ-
ಕಾಂತಿಗಳಿಂದ, ವಿಭಿನ್ನ-ಭೇದಿಸಲ್ಪಟ್ಟ, ಮಿಸ್ರಂ - ಗಾಢಾಂಧಕಾರವುಳ್ಳಂ
ಥ, ಹರಿಂ-ಶ್ರೀಕೃಷ್ಣಸ್ವಾಮಿಯುನ್ನು, ಸ್ಮರತಿ-ಸ್ಮರಿಸುಲಿಧೆ. ॥೪॥

ಪ. ಮಣಿಮಯಮಕರಮನೋಹರಕುಂಡಲಮಂಡಿತಗಂಡಮುದಾರಂ॥
ಪೀತವಸನಮನುಗತಮುನಿಮನುಜಸುರಾಸುರವರಪರಿವಾರಂ. ರಾಸೆ॥

ಟೀ. ಮಣಿಮಯ-ರತ್ನಮಯವಾದ, ಮಕರ-ಮಕರಾಕಾರವಾದ, ಮ
ನೋಹರ - ಚಿತ್ತಾನಂದಕರವಾದ, ಕುಂಡಲ - ಕರ್ಣ ಕುಂಡಲಗಳಿಂದ,
ಮಂಡಿತ-ಅಲಂಕರಿಸಲ್ಪಟ್ಟ, ಗಂಡಂ-ಕೆನ್ನೆಗಳುಳ್ಳ, ಉದಾರಂ - ಉತ್ಕೃ
ಷ್ಟವಾದ, ಪೀತವಸನಂ, ಪೀತ-ಹೊಂಬಣ್ಣವಾದ, ವಸನಂ-ವಸ್ತ್ರವುಳ್ಳ,
ಅನುಗತ-ಅನುಸರಿಸಿಬಂದಿರುವ, ಮುನಿ-ಋುಷಿಗಳನು, ಮನುಜ- ಮನು
ಷ್ಯರುಗಳನು, ಸುರ-ದೇವತೆಗಳನು, ಅಸುರ - ರಾಕ್ಷಸರುಗಳನು, ಯಿವ
ರಗಳ, ವರ-ಶ್ರೇಷ್ಠವಾದ, ಪರಿವಾರಂ-ಸಮೂಹವುಳ್ಳ, ಹರಿಂ-ಕೃಷ್ಣನ
ನ್ನು, ಸ್ಮರತಿ-ಸ್ಮರಿಸುತಲಿಧೆ. ... ... ॥೫॥

ಪ. ವಿಶದಕದಂಬತಲೆಮಿಳಿತಂಕಲಿಕಲುಷಭಯಂಶಮಯಂತಂಮೂಮಪಿ
ಕಿಮಪಿತರಂಗದನಂಗದೃಶಾಮನಸಾರಮಯಂತಂ. ರಾಸೆ॥ ಟೀ. ವಿಶದಕ
ದಂಬತಲೆ, ವಿಶದ-ನಿರ್ಮಲವಾದ, ಕದಂಬ-ಕದಂಬವೃಕ್ಷದ, ತಲೆ-ಬುಡದಲ್ಲಿ

ಮಿಳಿತಂ-ಸೇರಿಕೊಂಡಿರುವ, ಕಲಿಕಲುಷಭಯಂ, ಕಲಿ- ಕಲಿಯ, ಕಲುಷಭಯಂ - ಪಾಪಭಯವನ್ನು, ಶಮಯಂತಂ - ಹೋಗಲಾಡಿಸುತ್ತಲಿರುವ, ತರಂಗದನಂಗದೃಶಾ, ತರಂಗತ್-ವೃದ್ಧಿಹೊಂದುತಲಿರುವ, ಅನಂಗ-ಮನ್ಮಥನುಳ್ಳ, ದೃಶಾ - ನೇತ್ರದಿಂದಲೂ, ಮನಸಾಪಿ - ಮನಸ್ಸಿನಿಂದಲೂಕೂಡ, ಮಾಂ - ನನ್ನನ್ನು, ಕಿಮಪಿ - ವಿವರಿಸ ಲಶಕ್ಯವಾಗಿ, ರಮಯಂತಂ - ಪ್ರೀತಿ ಪಡಿಸುತ್ತಲಿರುವ, ಹರಿಂ - ಶ್ರೀಕೃಷ್ಣನನ್ನು, ಸ್ಮರತಿ-ಸ್ಮರಿಸುತ್ತಲಿಧೆ. ... ... ... ... ‖೬‖

ಪ. ಜಲದಪಟಲಚಲದಿಂದುವಿನಿಂದಕಚಂದನಬಿಂದುಲಲಾಟಂ ‖ ಪೀನಪಯೋಧರಪರಿಸರಮರ್ದನನಿರ್ದಯಹೃದಯಕವಾಟಂ. ರಾಸೆ‖ ಟೀ. ಜಲದ-ಮೇಘಗಳ, ಪಟಲ-ಗುಂಪುಗಳಲ್ಲಿ, ಚಲತ್-ಚಲಿಸುತಲಿರುವ, ಇಂದು-ಚಂದ್ರನನ್ನು, ವಿನಿಂದಕ-ತಿರಸ್ಕರಿಸುತಲಿರುವ, ಚಂದನ-ಶ್ರೀಗಂಧದ, ಬಿಂದು-ಬಟ್ಟುಳ್ಳ, ಲಲಾಟಂ-ಹಣೆಯುಳ್ಳ, ಪೀನಪಯೋಧರ-ದಪ್ಪವಾದಕುಚಗಳ, ಪರಿಸರ-ಸಮೀಪದಲ್ಲಿ, ಮರ್ದನ-ಪೀಡಿಸೋಣದರಲ್ಲಿ, ನಿರ್ದಯ-ಕರುಣಯಿಲ್ಲದ, ಹೃದಯಕವಾಟಂ-ಕದವಿನಂತಿರುವ ಯೆದೆಯುಳ್ಳ, ಹರಿಂ-ಕೃಷ್ಣಸ್ವಾಮಿಯನ್ನು, ಸ್ಮರತಿ-ಸ್ಮರಿಸುತಲಿಧೆ. ... ... ‖೭‖

ಪ ಶ್ರೀಜಯದೇವಭಣಿತಮತಿಸುಂದರಮೋಹನಮಧುರಿಪುರೂಪಂ ‖ ಹರಿಚರಣಸ್ಮರಣಂಪ್ರತಿಸಂಪ್ರತಿಪುಣ್ಯವತಾಮನುರೂಪಂ ‖ ರಾಸೆ ಹರಿಮಿಹವಿಹಿತವಿಲಾಸಂಸ್ಮರತಿಮನೋಮಕೃತಪರಿಹಾಸಂ‖ ರಾಸೆ ಹರಿಮಿಹನಿಹಿತವಿಲಾಸಂ‖ ಟೀ ಅತಿಸುಂದರಮೋಹನಮಧುರಿಪುರೂಪಂ, ಅತಿಸುಂದರ-ಅತ್ಯಂತಚಲುವಾದ, ಮೋಹನ-ಮೋಹಗೊಳಿಸುವ, ಮಧುರಿಪು-ಶ್ರೀಕೃಷ್ಣನ, ರೂಪಂ-ಆಕಾರವುಳ್ಳ, ಶ್ರೀಜಯದೇವಭಣಿತಂ, ಶ್ರೀಜಯದೇವ-ಜಯದೇವಕವಿಯ, ಭಣಿತಂ-ವಾಕ್ಯ, ಪುಣ್ಯವತಾಂ-ಪುಣ್ಯವಂತರುಗಳಿಗೆ, ಹರಿಚರಣಸ್ಮರಣಂಪ್ರತಿ, ಹರಿ-ಕೃಷ್ಣನ, ಚರಣ-ಪಾದಗಳ, ಸ್ಮರಣಂಪ್ರತಿ-ನೆನಪಂಕುರಿತು, ಸಂಪ್ರತಿ-ಈಗ, ಅನುರೂಪಂ-ಅನುಕೂಲವಾದದ್ದು ‖ತಾ. ಅಂಗಂಗಳೊಳ್ ಸಿಂಗರಿಸಿರುವ ಭಂಗಾರದ ಒಡವೆಗಳಿಂ ಶೃಂಗಾರವಿಲಾಸಂಗಳಿಂ ಕಂಗೊಳಿಸುವ ಮಂಗಳಾಂಗನಾದ ಯದುಪುಂಗವನನ್ನೆ ನನ್ನ ಮನಸ್ಸು ನೆನಸುತಲಿಧೆಯೆಂದು ರಾಧೆಯು ಕೆಳದಿಯಂ ಕುರಿತು ಪೇಳಿದಳು.

ಶ್ಲೋ‖ ಗಣಯತಿಗುಣಗ್ರಾಮಂಭ್ರಾಮಂಭ್ರಮಾದಪಿನೇಹತೇವಹತಿಚಪರಿತೋಷಂದೋಷಂವಿಮುಂಚತಿದೂರತಃ‖ ಯುವತಿಷುವಲತ್ತೃಷ್ಣೇಕೃಷ್ಣೇವಿಹಾ

ರಿಣಿಮಾಂವಿನಾಪುನರಪಿಮನೋವಾಮಂಕಾಮಂಕರೋತಿಕರೋಮಿಕಿಂ॥

ಟೀ. ಯುವತಿಷು - ಗೋಪತರುಣಿಯರಲ್ಲಿ, ವಲತ್ತೃಷ್ಣೇ, ವಲತ್-ವೃದ್ಧಿಹೊಂದುತಲಿರುವ, ತೃಷ್ಣೆ-ಆಶೆಯುಳ್ಳ, ಕೃಷ್ಣೇ-ಶ್ರೀಕೃಷ್ಣನು, ಮಾಂವಿನಾ-ನನ್ನಂಬಿಟ್ಟು, ವಿಹಾರಿಣಿಸತ್ಯಪಿ-ಕ್ರೀಡಿಸುತ್ತಿರಲಾಗಿಯೂ, ವಾಮಂ-ವಕ್ರವಾದ, ಮನಃ-ಮನಸ್ಸು, ಗುಣಗ್ರಾಮಂ, ಗುಣ- ಸದ್ಗುಣಗಳ, ಗ್ರಾಮಂ-ಸಮೂಹವನ್ನು, ಗಣಯತಿ-ಎಣಿಸುತಲಿಧೆ, ಭ್ರಮಾದಪಿ-ಭ್ರಾಂತಿಯ ದೆಸೆಯಿಂದಲೂಕೂಡ, ಭ್ರಾಮಂ - ಕೃಷ್ಣನಂಬಿಟ್ಟು, ಚಲನವನ್ನು, ನೇಹತೆ-ಕೋರುವದಿಲ್ಲ, ಪರಿತೋಷಂ- ಸಂತೋಷವನ್ನು, ವಹತಿ-ಹೊಂದುತಲಿಧೆ, ದೋಷಂ-ಕೋಪವನ್ನು, ದೂರತಃ-ದೂರದಲ್ಲಿ, ವಿಮುಂಚತಿ-ಬಿಡುತಲಿಧೆ, ಪುನರಪಿ-ಮತ್ತೂಕೂಡ, ಕಾಮಂ-ಅಪೇಕ್ಷೆಯನ್ನು, ಕರೋತಿ ಮಾಡುತಲಿಧೆ, ಕಿಂಕರೋಮಿ-ಯೇನುಮಾಡಲಿ॥ ತಾ. ಶ್ರೀಕೃಷನು ನನ್ನಂಬಿಟ್ಟು ಸವತಿಯರಾದ ಗೋಪಸ್ತ್ರೀಗಳಲ್ಲಿ ಕ್ರೀಡಿಸುತಲಿದ್ದಾಗ್ಯೂ ಚಪಲವಾದ ನನ್ನ ಮನಸ್ಸು ಮತ್ತವನನ್ನೆ ಬಯಸುತಲಿಧೆ ಯೇನುಮಾಡಲೀ ಯಂಬದಾಗಿ ಸಖಿಯೊಡನೆ ರಾಧೆಯು ಹೇಳಿದಳು. ... ॥೧೮॥

ಷಷ್ಠಾಷ್ಟಪದೀ ಪ್ರಾರಂಭಃ. ರಾಗ - ಗುಣಕ್ರಿಯಾ.

ಪ. ನಿಭೃತನಿಕುಂಜಗೃಹಂಗತಯಾನಿಶಿರಹಸಿನಿಲೀಯವಸಂತಂ॥ ಚಕಿತವಿಲೋಕಿತಸಕಲದಿಶಾರತಿರಭಸವಶೇನಹಸಂತಂ॥ ಸಖಿಹೇಕೇಶಿಮಥನಮುದಾರಂ ರಮಯಮಯಾಸಹಮದನಮನೋರಥಭಾವಿತಯಾಸವಿಕಾರಂ ॥ ಸಖಿಹೇಕೇಶಿಮಥ॥ ಟೀ. ನಿಶಿ-ರಾತ್ರಿಯಲ್ಲಿ, ನಿಭೃತನಿಕುಂಜಗೃಹಂ, ನಿಭೃತ-ನಿಶ್ಶಬ್ದವಾದ, ನಿಕುಂಜಗೃಹಂ - ಬಳ್ಳಿಯಮನೆಯನ್ನು, ಗತಯಾ- ಹೊಂದಿದನಂನೊಡನೆಕೂಡ, ರಹಸಿ- ಏಕಾಂತದಲ್ಲಿ, ನಿಲೀಯ - ಅಡಗಿಕೊಂಡು, ವಸಂತಂ - ವಾಸಮಾಡುತಲಿರುವ, ಚಕಿತವಿಲೋಕಿತಸಕಲದಿಶಾ, ಚಕಿತ-ಭಯದಿಂದ, ವಿಲೋಕಿತ-ನೋಡಲ್ಪಟ್ಟ, ಸಕಲ-ಸಮಸ್ತವಾದ, ದಿಶಾ-ದಿಕ್ಕುಗಳುಳ್ಳನನ್ನೊಡನೆ, ರತಿರಭಸವಶೇನ, ರತಿ- ಕ್ರೀಡೆಯ, ರಭಸ-ವೇಗದ, ವಶೇನ-ಅಧೀನದಿಂದ, ಹಸಂತಂ-ನಗುತಲಿರುವ, ಕೇಶಿಮಥನಂ-ಶ್ರೀಕೃಷ್ಣನನ್ನು, ರಮಯ-ರಮಿಸುವಹಾಗೆಮಾಡು ಹೇಸಖಿ-ಎಲೈಸಖಿಯೆ, ಮದನಮನೋರಥಭಾವಿತಯಾ, ಮದನ - ಮನ್ಮಥನಿಂದುಂಟಾದ, ಮನೋರಥ- ಅಭಿಲಾಷೆಯಿಂದ, ಭಾವಿತಯಾ - ಸಂಭಾವಿತಳಾದ, ಮಯಾಸಹ - ನನ್ನೊಡನೆ ಕೂಡ, ಸವಿಕಾರಂ- ಮನ್ಮಥವಿಕಾರ ಸಹಿತನಾದ, ಉದಾ

ರಂ - ಶ್ರೇಷ್ಠನಾದ, ಕೇಶಿಮಥನಂ - ಶ್ರೀಕೃಷ್ಣನನ್ನು, ರಮಯ - ಕ್ರೀಡಿಸುವಹಾಗೆಮಾಡು. ... ... ... ॥೧॥

ಪ. ಪ್ರಥಮಸಮಾಗಮಲಜ್ಜಿತಯಾಪಟುಚಾಟುಶತೈರನುಕೂಲಂ॥ಮೃದುಮಧುರಸ್ಮಿತಭಾಷಿತಯಾಶಿಥಿಲೀಕೃತಜಘನದುಕೂಲಂ. ಸಖಿ॥ಟೀ. ಪ್ರಥಮಸಮಾಗಮಲಜ್ಜಿತಯಾ, ಪ್ರಥಮ-ಮೊದಲನೆದಾದ, ಸಮಾಗಮ-ಸಂಭೋಗದಿಂದ, ಲಜ್ಜಿತಯಾ - ನಾಚಿಕೆಪಡಿಸಲ್ಪಟ್ಟನನ್ನೊಡನೆ, ಪಟುಚಾಟುಶತೈಃ, ಪಟು-ಸಮರ್ಥವಾದ, ಚಾಟು-ಪ್ರಿಯನುಡಿಗಳ, ಶತೈಃ-ಅನೇಕಗಳಿಂದ, ಅನುಕೂಲಂ- ಇಷ್ಟನಾದ, ಮೃದುಮಧುರಸ್ಮಿತಭಾಷಿತಯಾ, ಮೃದು -- ಮೃದುವಾದ, ಮಧುರಸ್ಮಿತ - ಮನೋಹರವಾದ, ಮಂದಹಾಸವುಳ್ಳ, ಭಾಷಿತಯಾ -- ವಾಕ್ಯಗಳುಳ್ಳನನ್ನೊಡನೆ, ಶಿಥಿಲೀಕೃತಜಘನದುಕೂಲಂ, ಶಿಥಿಲೀಕೃತ - ಸಡಲಿಸಲ್ಪಟ್ಟ, ಜಘನ - ಕಟಿಪುರೋಭಾಗದ, ದುಕೂಲಂ - ವಸ್ತ್ರವುಳ್ಳ, ಕೇಶಿಮಥನಂ-ಶ್ರೀಕೃಷ್ಣನನ್ನು, ರಮಯ - ರಮಿಸುವಹಾಗೆ ಮಾಡು. ... ... ... ॥೨॥

ಪ. ಕಿಸಲಯಶಯನನಿವೇಶಿತಯಾಚಿರಮುರಸಿಮಮೈವಶಯಾನಂ॥ಕೃತಪರಿರಂಭಣಚುಂಬನಯಾಪರಿರಭ್ಯಕೃತಾಧರಪಾನಂ. ಸಖಿ॥ ಟೀ. ಕಿಸಲಯಶಯನನಿವೇಶಿತಯಾ, ಕಿಸಲಯ-ಚಿಗುರುಗಳ, ಶಯನ - ಹಾಸಿಗೆಯಲ್ಲಿ, ನಿವೇಶಿತಯಾ - ಮಲಗಿಸಲ್ಪಟ್ಟನನ್ನೊಡನೆ, ಚಿರಂ - ಬಹುಕಾಲವಾಗಿ, ಮಮ-ನನ್ನ, ಉರಸ್ಯೇವ-ವಕ್ಷಸ್ಥಳದಲ್ಲಿಯೇ, ಶಯಾನಂ-ಮಲಗಿಕೊಂಡಿರುವ, ಕೃತಪರಿರಂಭಣಚುಂಬನಯಾ, ಕೃತ - ಮಾಡಲ್ಪಟ್ಟ, ಪರಿರಂಭಣ-ಆಲಿಂಗನವನ್ನು, ಚುಂಬನಯಾ -- ಚುಂಬನವನ್ನು, ಇವುಗಳುಳ್ಳನನ್ನೊಡನೆ, ಪರಿರಭ್ಯ - ಅಪ್ಪಿಕೊಂಡು, ಕೃತಾಧರಪಾನಂ, ಕೃತ - ಮಾಡಲ್ಪಟ್ಟ, ಅಧರಪಾನಂ-ಅಧರಪಾನವುಳ್ಳ, ಕೇಶಿಮಥನಂ - ಶ್ರೀಕೃಷ್ಣನನ್ನು, ರಮಯ-ರಮಿಸುವಹಾಗೆಮಾಡು. ... ... ॥೩॥

ಪ. ಅಲಸನಿಮೀಲಿತಲೋಚನಯಾಪುಲಕಾವಳಿಲಲಿತಕಪೋಲಂ॥ ಶ್ರಮಜಲಸಂಕುಲಕಳೇಬರಯಾವರಮದನಮದಾದತಿಲೋಲಂ ಸಖಿ॥ ಟೀ. ಅಲಸನಿಮೀಲಿತಲೋಚನಯಾ; ಅಲಸ-ಬಳಲಿರೋಣಹ್ಯಾಗೋಹಾಗೆ, ನಿಮೀಲಿತ -ಮುಚ್ಚಲ್ಪಟ್ಟಲೋಚನಯಾ-ಕಣ್ಣುಗಳುಳ್ಳನನ್ನೊಡನೆ, ಪುಲಕಾವಳಿಲಲಿತಕಪೋಲಂ,ಪುಲಕ-ರೋಮಾಂಚಗಳ, ಆವಳಿ-ಸಾಲುಗಳಿಂದ,ಲಲಿತ-ಮನೋಹರವಾದ,ಕಪೋಲಂ-ಕೆನ್ನೆಯುಳ್ಳ,ಶ್ರಮಜಲಸಂಕುಲಕಳೇಬರಯಾ,ಶ್ರಮಜಲ-

ಬೆವರ್ನೀರ್ನಿಂದ, ಸಂಕುಲ- ಕೂಡಿರುವ, ಕಳೇಬರಯಾ - ಶರೀರವುಳ್ಳ, ನನ್ನೊಡನೆ, ವರಮದನಮದಾತ್, ವರ-ಶ್ರೇಷ್ಠವಾದ, ಮದನ-ಮನ್ಮಥನಿದುಂಟಾದ, ಮದಾತ್-ಸೊಕ್ಕಿನಿಂದ, ಅತಿಲೋಲಂ - ಅತ್ಯಂತಚಪಲನಾದ ಕೇಶಿಮಥನಂ-ಕೃಷ್ಣನನ್ನು, ರಮಯ-ರಮಿಸುವಹಾಗೆಮಾಡು. ||೪

ಪ. ಕೋಕಿಲಕಲರವಕೂಜಿತಯಾಜಿತಮನಸಿಜತಂತ್ರವಿಚಾರಂ॥ ಶ್ಲಥಕುಸುಮಾಕುಲಕುಂತಲಯಾನಖಲಿಖಿತಘನಸ್ತನಭಾರಂ ಸಖಿ। ಟೀ. ಕೋಕಿಲಕಲರವಕೂಜಿತಯಾ, ಕೋಕಿಲ-ಕೋಗಿಲೆಯ, ಕಲ-ಅವ್ಯಕ್ತಮಧುರವಾದ, ರವ - ಧ್ವನಿಯೋಪಾದಿಯ ಸಪ್ಪ, ಕೂಜಿತಯಾ- ರತಿಕೂಜಿವುಳ್ಳನನ್ನೊಡನೆ, ಜಿತಮನಸಿಜತಂತ್ರವಿಚಾರಂ, ಜಿತ-ಜೈಸಲ್ಪಟ್ಟ, ಮನಸಿಜಮನ್ಮಥನ, ತಂತ್ರ-ಶಾಸ್ತ್ರದ, ವಿಚಾರಂ-ವಿಚಾರವುಳ್ಳ. ಶ್ಲಥಕುಸುಮಾಕುಲಕುಂತಲಯಾ, ಶ್ಲಥ-ಜಾರಿದ, ಕುಸುಮ- ಪುಷ್ಪಗಳಿಂದ, ಆಕುಲ - ವ್ಯಾಪ್ತವಾದ, ಕುಂತಲಯಾ - ಕೂದಲುಗಳುಳ್ಳ ನನ್ನೊಡನೆ, ನಖಲಿಖಿತಘನಸ್ತನಭಾರ, ನಖ-ಉಗುರುಗಳಿಂದ, ಲಿಖಿತ-ಗೀರಲ್ಪಟ್ಟ, ಘನ-ಘಟ್ಟಿಯಾದ, ಸ್ತನಭಾರಂ-ಕುಚಮಂಡಲಗಳುಳ್ಳ, ಕೇಶಿಮಥನಂ-ಶ್ರೀಕೃಷ್ಣನನ್ನು ರಮಯ-ರಮಿಸುವಹಾಗೆ ಮಾಡು. ... ... ... ||೫

ಪ. ರತಿಸುಖಸಮಯರಸಾಲಸಯಾದರಮುಕುಳಿತನಯನಸರೋಜಂ ನಿಸ್ಸಹನಿಪತಿತತನುಲತಯಾಮಧುಸೂದನಮುದಿತಮನೋಜಂ. ಸಖಿ॥

ಟೀ. ರತಿಸುಖಸಮಯರಸಾಲಸಯಾ, ರತಿಸುಖ - ಕ್ರೀಡಾಸುಖದ, ಸಮಯ-ಕಾಲದಲ್ಲಿ, ಉಂಟಾದರಸ-ಅನುರಾಗದಿಂದ, ಅಲಸಯಾ-ಬಳಲಿರುವನನ್ನೊಡನೆ, ದರಮುಕುಳಿತನಯನಸರೋಜಂ, ದರ - ಸ್ವಲ್ಪವಾಗಿ, ಮುಕುಳಿತ - ಮುಚ್ಚಲ್ಪಟ್ಟ, ನಯನಸರೋಜಂ -- ಕಮಲದಂತಿರುವ, ಕಣ್ಣುಳುಳ್ಳ, ನಿಸ್ಸಹನಿಪತಿತತನುಲತಯಾ, ನಿಸ್ಸಹ- ಸಹಿಸಲಶಕ್ಯವಾಗಿರೋಹ್ಯಾಗೋಹಾಗೆ, ನಿಪತಿತ - ಬಿದ್ದಿರುವ, ತನುಲತಯಾ, ಬಳ್ಳಿಯಂತಿರುಶರೀರವುಳ್ಳ ನನ್ನೊಡನೆ, ಉದಿತಮನೋಜಂ, ಉದಿತ - ಉಂಟಾದ, ಮನೋಜಂ - ಮನ್ಮಥನುಳ್ಳ, ಮಧುಸೂದನಂ - ಶ್ರೀಕೃಷ್ಣನನ್ನು, ರಮಯ - ರಮಿಸುವಹಾಗೆಮಾಡು. ... ... ||೬

ಪ. ಚರಣರಣಿತಮಣಿನೂಪುರಯಾಪರಿಪೂರಿತಸುರತವಿತಾನಂ॥ ಮುಖವಿಶೃಂಖಲಮೇಖಲಯಾಸಕಚಗ್ರಹಚುಂಬನದಾನಂ॥ ಸಖಿ. ಟೀ. ಚರಣರಣಿತಮಣಿನೂಪುರಯಾ, ಚರಣ - ಕಾಲುಗಳಲ್ಲಿ, ರಣಿತ- ಧ್ವನಿಮಾಡುತಲಿರುವ

ಮಣಿ – ಮಣಿಗಳುಳ್ಳ, ನೂಪುರಯಾ – ಕಡಗಗಳುಳ್ಳ ನನ್ನೊಡನೆ, ಪರಿಪೂರಿತಸುರತವಿತಾನಂ, ಪರಿಪೂರಿತ – ಸಂಪೂರ್ಣವಾಗಿ ಮಾಡಲ್ಪಟ್ಟ, ಸುರತ – ಕ್ರೀಡೆಯ, ವಿತಾನಂ — ವಿಸ್ತಾರವುಳ್ಳ, ಮುಖರವಿಶೃಂಖಲಮೇಖಲಯಾ, ಮುಖರ–ಸದ್ದಾಗುತಲಿರುವ, ವಿಶೃಂಖಲ– ಸಡಲಿದಕೊಕ್ಕೆಯುಳ್ಳ, ಮೇಖಲಯಾ – ಒಡ್ಯಾಣವುಳ್ಳ ನನ್ನೊಡನೆ, ಸಕಚಗ್ರಹಚುಂಬನದಾನಂ, ಸಕಚಗ್ರಹ– ಕೇಶಗ್ರಹಣದೊಡನೆಕೂಡಿರುವ, ಚುಂಬನದಾನಂ – ಮುತ್ತುಕೊಡೋಣವುಳ್ಳ, ಕೇಶಿಮಥನಂ – ಶ್ರೀಕೃಷ್ಣನನ್ನು, ರಮಯ – ರಮಿಸೂವಹಾಗೆ ಮಾಡು.

ಶ್ರೀಜಯದೇವಭಣಿತಮಿದಮದ್ಭುತಮಧುರಿಪುನಿಧುವನಶೀಲಂ। ಸುಖಮುತ್ಕಂಠಿತರಾಧಿಕಯಾಕಥಿತಂವಿತನೋತುಸಲೀಲಂ॥ ಸಖಿಹೆಕೇಶಿಮಥನಮುದಾರಂ।ರಮಯಮಯಾಸಹಮದನಮನೋರಥಭಾವಿತಯಾಸವಿಕಾರಂ॥

ಟೀ. ಅದ್ಭುತಮಧುರಿಪುನಿಧುವನಶೀಲಂ, ಅದ್ಭುತ – ಆಶ್ಚರ್ಯಕರವಾದ, ಮಧುರಿಪು–ಶ್ರೀಕೃಷ್ಣನ, ನಿಧುವನ–ಮೈಥುನವೆ, ಶೀಲಂ–ಸ್ವಭಾವವಾಗಿವುಳ್ಳ, ಉತ್ಕಂಠಿತರಾಧಿಕಯಾ, ಉತ್ಕಂಠಿತ – ಕೃಷ್ಣನಲ್ಲಿ ಅತ್ಯಾಸಕ್ತಿಯುಳ್ಳ, ರಾಧಿಕಯಾ – ರಾಧೆಯಿಂದ, ಕಥಿತಂ – ಹೇಳಲ್ಪಟ್ಟ, ಶ್ರೀಜಯದೇವಭಣಿತಂ, ಶ್ರೀಜಯದೇವ–ಜಯದೇವನೆಂಬಕವಿಯಿಂದ, ಭಣಿತಂ– ರಚಿಸಲ್ಪಟ್ಟ, ಸಲೀಲಂ–ವಿಲಾಸಯುಕ್ತವಾಗಿರೋಣ ಹ್ಯಾಗೋಹಾಗೆ, ಇದಂ – ಈಗೀತವು, ಸುಖಂ–ಸುಖವನ್ನು, ವಿತನೋತು–ವಿಸ್ತಾರವಾಗಿಉಂಟುಮಾಡಲಿ.

ತಾ. ರಾಧಾದೇವಿಯು ಪೂರ್ವದಲ್ಲಿ ಶ್ರೀಕೃಷ್ಣನೊಡಗೂಡಿ ಕ್ರೀಡಿಸಿದಪರಿಯಂ ವಿವರವಾಗಿ ಬಣ್ಣಿಸಿ ವಿರಹದಿಂ ಹಂಬಲಿಸುತ ಅಂತಿರ್ಪ ಶ್ರೀಕೃಷ್ಣನಂ ಈಗ ತನ್ನೊಡನೆ ರಮಿಸುವಹಾಗೆ ಮಾಡೆಂದು ಸಖಿಯಂ ಕುರಿತು ನುಡಿದಳು.

ಶ್ಲೋ. ಹಸ್ತಸ್ರಸ್ತವಿಲಾಸವಂಶಮನೃಜುಭ್ರೂವಲ್ಲಿಮದ್ವಲ್ಲವೀಬೃಂದೋತ್ಸಾಹದೃಗಂತವೀಕ್ಷಿತಮತಿಸ್ವೇದಾರ್ದ್ರಗಂಡಸ್ಥಲಂ। ಮಾಮುದ್ವೀಕ್ಷ್ಯವಿಲಜ್ಜಿತಸ್ಮಿತಸುಧಾಮುಗ್ಧಾನನಂಕಾನನೆಗೋವಿಂದಂವ್ರಜಸುಂದರೀಪರಿವೃತಂಪಶ್ಯಾಮಿಹೃಷ್ಯಾಮಿಚ॥ ಟೀ. ಕಾನನೆ– ಬೃಂದಾವನದಲ್ಲಿ, ಹಸ್ತಸ್ರಸ್ತವಿಲಾಸವಂಶಂ, ಹಸ್ತ–ಕೈಯಿಂದ, ಸ್ರಸ್ತ–ಜಾರಿದ, ವಿಲಾಸ–ಕ್ರೀಡಾರ್ಥವಾದ, ವಂಶಂ–ಕೊಳಲುಳ್ಳ, ಅನೃಜುಭ್ರೂವಲ್ಲಿಮದ್ವಲ್ಲವೀಬೃಂದೋತ್ಸಾಹದೃಗಂತವೀಕ್ಷಿತಂ, ಅನೃಜು – ಕುಟಿಲವಾದ, ಭ್ರೂವಲ್ಲಿಮತ್ – ಹುಬ್ಬುಗಳುಳ್ಳ, ವಲ್ಲವೀ — ಗೋಪಿಕಾಂಗನೆಯರ, ಬೃಂದ — ಗುಂಪುಗಳಿಂದುಂಟಾದ

ಉತ್ಸಾಹ-ಸಂತೋಷದಿಂದ, ದೃಗಂತ- ಕಟಾಕ್ಷದಿಂದ, ವೀಕ್ಷಿತಂ - ನೋಡಲ್ಪಟ್ಟ, ಅತಿಸ್ವೇದಾರ್ದ್ರಗಂಡಸ್ಥಲಂ, ಅತಿಸ್ವೇದ - ಅತ್ಯಂತಬೆವರ್ನೀರಿನಿಂದ, ಆರ್ದ್ರ-ನೆನಸಲ್ಪಟ್ಟ, ಗಂಡಸ್ಥಲಂ- ಕೆನ್ನೆಗಳುಳ್ಳ, ವ್ರಜಸುಂದರೀಪರಿವೃತಂ, ವ್ರಜಸುಂದರೀ - ಗೋಪಸ್ತ್ರೀರಗಳಿಂದ, ಪರಿವೃತಂ - ಸುತ್ತಲ್ಪಟ್ಟ, ಮಾಂ-ನನ್ನನ್ನು, ಉದ್ವೀಕ್ಷ್ಯ - ನೋಡಿ, ವಿಲಜ್ಜಿತಸ್ಮಿತಸುಧಾಮುಗ್ಧಾನನಂ, ವಿಲಜ್ಜಿತ-ನಾಚಿಗೆಯಿಂದಲೂ, ಸ್ಮಿತಸುಧಾ- ಅಮೃತದಂತಿರುವ ಮುಗುಳ್ನಗೆಯಿಂದಲೂ, ಮುಗ್ಧ- ಮನೋಹರವಾದ, ಆನನಂ-ಮುಖವುಳ್ಳ, ಗೋವಿಂದಂ- ಶ್ರೀಕೃಷ್ಣನನ್ನು, ಪಶ್ಯಾಮಿ - ನೋಡುತ್ತೇನೆ, ಹೃಷ್ಯಾಮಿಚ - ಸಂತೋಷವನ್ನೂ ಪಡುತ್ತೇನೆ. ತಾ. ಮೊದಲು ಬೃಂದಾವನದೊಳು ಗೋಪಿಕಾಂಗನೆಯರೊಡಗೂಡಿ ಕ್ರೀಡಿಸುವಸಮಯದೋಳ್ ನನ್ನಂಕಂಡು ಲಜ್ಜೆಗೊಂಡು ಮುಗುಳ್ನಗೆಗೈಯುತಲಿರ್ದ ಕೃಷ್ಣನಂ ನೋಡಿ ಸಂತೋಷಪಡುತ್ತೇನೆ.

ಶ್ಲೋ. ದುರಾಲೋಕಸ್ತೋಕಸ್ತಬಕನಮಿತಾಶೋಕಕಲಿಕಾವಿಕಾಸಃಕಾಸಾರೋಪವನಪವನೋಯಂವ್ಯಥಯತಿ॥ ಅಪಿಭ್ರಾಮ್ಯದ್ಭೃಂಗೀರಣಿತರಮಣೀಯಾನಮುಕುಳಪ್ರಸೂತಿಶ್ಚೂತಾನಾಂಸಖಿಶಿಖರಿಣೀಯಂಸುಖಯತಿ॥

ಟೀ. ಅಸ್ತೋಕಸ್ತಬಕನಮಿತಾಶೋಕಕಲಿಕಾವಿಕಾಸಃ, ಅಸ್ತೋಕ-ಥಟ್ಟವಾದ, ಸ್ತಬಕ - ಗೊಂಚಲುಗಳಿಂದ, ನಮಿತ- ಬಗ್ಗಿಸಲ್ಪಟ್ಟ, ಅಶೋಕ-ಅಶೋಕವೃಕ್ಷಗಳ, ಕಲಿಕಾ- ಮೊಗ್ಗುಗಳ, ವಿಕಾಸಃ-ಅರಳೋಣವು, ದುರಾಲೋಕಃ-ನೋಡಲಶಕ್ಯವಾದುದು, ಅಯಂ - ಈ ಕಾಸಾರೋಪವನಪವನಃ, ಕಾಸಾರ-ಸರಸ್ಸಿನ, ಉಪವನ - ಉದ್ಯಾನವನದ, ಪವನಃ-ವಾಯುವು, ವ್ಯಥಯತಿ-ದುಃಖಪಡಿಸುತಲಿಧೆ, ಹೇಸಖಿ- ಎಲೈಕೆಳದಿಯೆ, ಭ್ರಾಮ್ಯದ್ಭೃಂಗೀರಣಿತರಮಣೀಯಾ, ಭ್ರಾಮ್ಯತ್ - ಸುತ್ತುತಲಿರುವ, ಭೃಂಗೀ -- ಹೆಣ್ದುಂಬಿಗಳ, ರಣಿತ - ಝೇಂಕಾರದಿಂದ, ರಮಣೀಯಾ - ಮನೋಹರವಾದ, ಶಿಖರಿಣೀ-ಶಿಖರವುಳ್ಳ, ಚೂತಾನಾಂ - ಮಾವುಗಳ, ಮುಕುಳಪ್ರಸೂತಿಃ, ಮುಕುಳ-ಮುಗ್ಗುಗಳ,ಪ್ರಸೂತಿರಪಿ-ಉತ್ಪತ್ತಿಯೂ, ನಸುಖಯತಿ-ಸಂತೋಷಪಡಿಸುವದಿಲ್ಲ. ತಾ. ಎಲೈಕೆಳದಿಯೆ ಆ ಕಾಂತನಾದ ಕೃಷ್ಣನಂ ಅಗಲಿರುವ ನನಗೆ ಈ ಅರಳಿರುವ ಅಶೋಕಕುಸುಮದ ಗೊಂಚಲುಗಳಂ ಈಸರೋವರದ ಮಂದಮಾರುತಮಂ ಈ ಮಾವಿನಮರದಮೊಗ್ಗುಗಳಂ ವೆಗ್ಗಳವಾಗಿ ವ್ಯಥೆಪಡಿಸುತಲಿಧೆ.

ಗೀತಗೋವಿಂದ ಮಹಾಕಾವ್ಯದರಸಿಕರಂಜನೀ ಯೆಂಬ
ಟೀಕಿನೊಳ್ಯೆರಡನೆಸರ್ಗವು ಸಮಾಪ್ತವಾದುದು.

ಶ್ಲೊ॥ ಕಂಸಾರಿರಪಿಸಂಸಾರವಾಸನಾಬದ್ಧಶೃಂಖಲಾಂ॥ ರಾಧಾಮಾದಾಯಹೃದಯೆತತ್ಯಾಜವ್ರಜಸುಂದರೀಃ॥ ಟೀ. ಕಂಸಾರಿರಪಿ-ಶ್ರೀಕೃಷ್ಣನೂ ಕೂಡ, ಸಂಸಾರ-ಸಂಸಾರದ, ವಾಸನಾ-ವಾಸನೆಯಿಂದ, ಬದ್ಧ- ಕಟ್ಟಲ್ಪಟ್ಟ, ಶೃಂಖಲಾಂ-ಸರಪಣಿಯುಳ್ಳ, ರಾಧಾಂ-ರಾಧೆಯನ್ನು, ಹೃದಯೆ- ಮನಸ್ಸಿನಲ್ಲಿ, ಆದಾಯ- ನೆನಸಿ, ವ್ರಜಸುಂದರೀಃ-ಗೋಪತರುಣೀರುಗಳನ್ನು, ತತ್ಯಾಜ-ಬಿಟ್ಟನು. ತಾ. ಶ್ರೀಕೃಷ್ಣನೂಕೂಡ ಸಂಸಾರದೊಳತ್ಯಾಸಕ್ತಳಾದ ರಾಧೆಯಂ ಸ್ಮರಿಸಿ ಗೋಪತರುಣಿಯರಂ ತ್ಯಜಿಸಿದನೂ.

ಶ್ಲೊ. ಇತಸ್ತತಸ್ತಾಮನುಸೃತ್ಯರಾಧಿಕಾಮನಂಗಬಾಣವ್ರಣಖಿನ್ನಮಾನಸಃ॥ಕೃತಾನುತಾಪಸ್ಸಕಳಿಂದನಂದಿನೀತಟಾಂತಕುಂಜೆವಿಷಸಾದಮಾಧವಃ ಟೀ. ಅನಂಗಬಾಣವ್ರಣಖಿನ್ನಮಾನಸಃ, ಅನಂಗ - ಮನ್ಮಥನ, ಬಾಣ-ಅಂಬಿನಿಂದುಂಟಾದ, ವ್ರಣ-ಘಾಯದಿಂದ, ಖಿನ್ನ-ವ್ಯಥೆಪಡುತಲಿರುವ, ಮಾನಸಃ ಮನಸ್ಸುಳ್ಳ, ಮಾಧವಃ-ಶ್ರೀಕೃಷ್ಣನು, ತಾಂ- ಆವಿರಹಿಣಿಯಾದ, ರಾಧಿಕಾಂ-ರಾಧಾದೇವಿಯನ್ನು, ಇತಸ್ತತಃ- ಯಿಲ್ಲಿಅಲ್ಲಿ, ಅನುಸೃತ್ಯ - ಅನುಸರಿಸಿಹುಡಿಕಿ, ಕೃತಾನುತಾಪಸ್ಸ್, ಕೃತ -- ಮಾಡಲ್ಪಟ್ಟ, ಅನುತಾಪಸ್ಸ್ - ಪಶ್ಚಾತ್ತಾಪ ವುಳ್ಳವನಾಗಿ, ಕಳಿಂದನಂದಿನೀತಟಾಂತಕುಂಜೆ, ಕಳಿಂದನಂದಿನೀ - ಕಾಳಿಂದೀನದಿಯ, ತಟ - ತೀರದ, ಅಂತ - ಸಮಾಪದಲ್ಲಿರುವ, ಕುಂಜೆ-ಪೊದರಿನಲ್ಲಿ, ವಿಷಸಾದ-ದುಃಖಪಟ್ಟನೂ. ತಾ. ಶ್ರೀಕೃಷ್ಣನು ರಾಧಾದೇವಿಯನ್ನು ಅಲ್ಲಲ್ಲಿ ಹುಡುಕುತಕಾಣದೆ ಕಾಳಿಂದೀನದೀ ದಡದಪೊದರಿನೊಳ್ ಪಶ್ಚಾತ್ತಾಪದಿಂವ್ಯಥೆಪಡುತಿದ್ದನೂ.

ಸಪ್ತಮಾಷ್ಟಪದೀ ರಾಗ-ಭೂಪಾಳಿ.

ಮಾಮಿಯಂಚಲಿತಾವಿಲೋಕ್ಯವೃತಂವಧೂನಿಚಯೆನ। ಸಾಪರಾಧತಯಾಮಯಾಪಿನವಾರಿತಾತಿಭಯೆನ॥ಪ॥ ಹರಿಹರಿಹತಾದರತಯಾಸಾಗತಾಕುಪಿತೆವ॥ಹರಿಹರಿಹತಾದರತಯಾ॥ ಟೀ. ಇಯಂ-ಈರಾಧೆಯು, ವಧೂನಿಚಯೇನ-ಗೋಪೀರುಗಳ ಗುಂಪಿನಿಂದ, ವೃತಂ-ಸುತ್ತಿಕೊಳ್ಳಲ್ಪಟ್ಟ, ಮಾಂ-ನನ್ನನ್ನು, ವಿಲೋಕ್ಯ-ನೋಡಿ, ಚಲಿತಾ - ಹೊರಟುಹೋದಳು, ಅತಿಭಯೇನ- ಅತ್ಯಂತಭಯವುಳ್ಳ, ಮಯಾಪಿ - ನನ್ನಿಂದಲೂಕೂಡ, ಸಾಪರಾಧತಯಾ - ತಪ್ಪೊಡನೇಕೂಡಿಕೊಂಡಿರೋಣದರಿಂದ, ನವಾರಿತಾ -- ತಡಯಲ್ಪಡಲಿಲ್ಲ, ಸಾ - ಆರಾಧೆಯು, ಹತಾದರತಯಾ, ಹತ - ಹೋಗಲಾಡಿಸಲ್ಪಟ್ಟ, ಆದರತಯಾ- ಪ್ರೀತಿಯುಳ್ಳದ್ದರಿಂದ, ಕುಪಿತೇವ - ಕೋಪಿ

ನಿಕೊಂಡವಳೋಪಾದಿಯಲ್ಲಿ, ಗತಾ -- ಹೊರಟುಹೋದಳು, ಹರಿಹರಿ ಕಷ್ಟಕಷ್ಟ.

ಕಿಂಕರಿಷ್ಯತಿಕಿಂವದಿಷ್ಯತಿಸಾಚಿರಂವಿರಹೇಣಕಿಂಜನೇನಧನೇನಕಿಂಮಮಭೂಷಣೇನಗೃಹೇಣ॥ ಹರಿಹರಿ. ಟೀ. ಸಾ - ಆರಾಧೆಯು, ಚಿರಂ - ಬಹುಕಾಲವಾಗಿ, ವಿರಹೇಣ-ವಿಯೋಗದಿಂದ, ಕಿಂಕರಿಷ್ಯತಿ-- ಯೇನುಮಾಡುವಳು, ಕಿಂವದಿಷ್ಯತಿ- ಯೇನುಹೇಳುವಳು, ಮಮ-ನನಗೆ, ಜನೇನ - ಜನದಿಂದ, ಕಿಂ-ಯೇನು, ಧನೇನ-ಧನದಿಂದ, ಕಿಂ-ಯೇನು, ಭೂಷಣೇನ- ಒಡವೆಗಳಿಂದ, ಕಿಂ-ಯೇನುಪ್ರಯೋಜನ, ಗೃಹೇಣ- ಮನೆಯಿಂದ, ಕಿಂ- ಯೇನುಪ್ರಯೋಜನವು, ಹರಿಹರಿ- ಕಷ್ಟಕಷ್ಟ.

ಚಿಂತಯಾಮಿತದಾನನಂಕುಟಿಲಭ್ರುಕೋಪಭರೇಣ।ಶೋಣಪದ್ಮಮಿವೋಪರಿಭ್ರಮತಾಕುಲಂಭ್ರಮರೇಣ॥ಹರಿಹರಿ. ಟೀ. ಕೋಪಭರೇಣ-ಕೋಪರೋಷದ, ಭರೇಣ-ಅಧಿಕ್ಯದಿಂದ, ಕುಟಿಲಭ್ರು-ಗಂಟುಹುಬ್ಬುಗಳುಳ್ಳ, ಉಪರಿ-ಮೇಲುಭಾಗದಲ್ಲಿ, ಭ್ರಮತಾ - ಸುತ್ತುತಲಿರುವ, ಭ್ರಮರೇಣ - ತುಂಬಿಯಿಂದ, ಆಕುಲಂ - ಕೂಡಿರುವ, ಶೋಣಪದ್ಮಮಿವ-ಕೆಂಪುಕಮಲದೋಪಾದಿಯಲ್ಲಿರುವ, ತದಾನನಂ, ತತ್-ಆರಾಧೆಯು, ಆನನಂ - ಮುಖವನ್ನು, ಚಿಂತಯಾಮಿ-ಸ್ಮರಿಸುತ್ತೇನೆ.

ತಾಮಹಂಹೃದಿಸಂಗತಾಮನಿಶಂಭೃಶಂರಮಯಾಮಿ। ಕಿಂವನೇನುಸರಾಮಿತಾಮಿಹಕಿಂವೃಥಾವಿಲಪಾಮಿ॥ ಹರಿಹರಿ. ಟೀ. ಅಹಂ-ನಾನು, ಅನಿಶಂ-ನಿರಂತರದಲ್ಲೂ, ಹೃದಿ - ಮನಸ್ಸಿನಲ್ಲಿ, ಸಂಗತಾಂ - ಶೇರಿಕೊಂಡಿರುವ, -ತಾಂ- ಆರಾಧಾದೇವಿಯನ್ನು, ಭೃಶಂ - ಅತ್ಯಂತವಾಗಿ, ರಮಯಾಮಿ - ರಮಿಸುತ್ತೇನೆ, ವನೇ- ಬೃಂದಾವನದಲ್ಲಿ, ತಾಂ- ಆರಾಧೆಯನ್ನು, ಅನುಸರಾಮಿಕಿಂ-ಅನುಸರಿಸಲೇಯೇನು, ಇಹ-ಈಸ್ಥಳದಲ್ಲಿ, ವೃಥಾ - ವ್ಯರ್ಥವಾಗಿ, ಕಿಂವಿಲಪಾಮಿ- ಯಾತಕ್ಕೆಹಂಬಲಿಸುತ್ತೇನೆ, ಹರಿಹರಿ-ಕಷ್ಟಕಷ್ಟ.

ತನ್ವಿಖಿನ್ನಮಸೂಯಯಾಹೃದಯಂತವಾಕಲಯಾಮಿ।ತನ್ನವೇದ್ಮಿಕುತೋಗತಾಸಿನತೇನತೇನುನಯಾಮಿ॥ಹರಿಹರಿ. ಟೀ: ಹೇತನ್ವಿ-ಎಲೈಕೃಶಾಂಗಿಯಾದರಾಧೆಯೆ, ತವ-ನಿನ್ನ, ಹೃದಯಂ- ಮನಸ್ಸನ್ನು, ಅಸೂಯಯಾ -- ಅಸೂಯೆಯಿಂದ, ಖಿನ್ನಂ - ವ್ಯಥೆಪಡುತಲಿರುವದನ್ನಾಗಿ, ಆಕಲಯಾಮಿ -- ಯೆಣಿಸುತ್ತೇನೆ, ಕುತಃ-ಯೆಲ್ಲಿ, ಗತಾಸಿ-ಹೋದವಳಾದೆಯೊ, ತತ್ - ಅದನ್ನು, ನವೇದ್ಮಿ-ತಿಳಿಯಲಾರೆ, ತೇ-ನಿನಿಗೋಸ್ಕರ, ನತೇನ-ನಮಸ್ಕಾರದಿಂದ, ಅನುನಯಾಮಿ-ಸಮಾಧಾನಪಡಿಸುತ್ತೇನೆ, ಹರಿಹರಿ-ಕಷ್ಟಕಷ್ಟ.

ದೃಶ್ಯಸೇಪುರತೋಗತಾಗತಮೇವಮೇವಿದಧಾಸಿ|ಕಿಂಪುರೇವಸಸಂಭ್ರಮಂಪರಿರಂಭಣಂನದದಾಸಿ||ಹರಿಹರಿ. ಟೀ. ಮೇ-ನನ್ನ, ಪುರತಏವ-ಮುಂದೆಯೇ ಗತಾಗತಂ-ಸಂಚಾರವನ್ನು, ವಿದಧಾಸಿ-ಮಾಡುತಲಿಧ್ದೀಯೆ, ದೃಶ್ಯಸೆ-ಕಾಣಲ್ಪಡುತ್ತೀಯೆ, ಪುರೇವ-ಮೊದಲಿನಹಾಗೆ, ಸಸಂಭ್ರಮಂ-ತ್ವರೆಯೊಡನೆಕೂಡಿರೋಣಾಹ್ಯಾಗೋಹಾಗೆ, ಪರಿರಂಭಣಂ-ಆಲಿಂಗನವನ್ನು, ಕಿಂನದದಾಸಿ-ಯಾತಕ್ಕೆ ಕೊಡುವದಿಲ್ಲ, ಹರಿಹರಿ-ಕಷ್ಟಕಷ್ಟ.

ಕ್ಷಮ್ಯತಾಮಪರಂಕದಾಪಿತವೇದೃಶಂನಕರೋಮಿ|ದೇಹಿಸುಂದರಿದರ್ಶನಂಮಮಮನ್ಮಥೇನದುನೋಮಿ||ಹರಿಹರಿ. ಟೀ. ಕ್ಷಮ್ಯತಾಂ-ಸಹಿಸಲ್ಪಡಲಿ, ತವ-ನಿನಿಗೆ, ಕದಾಪಿ-ಎಂದೆಂದಿಗೂ, ಈದೃಶಂ-ಈವಿಧವಾದ, ಅಪರಂ-ಮತ್ತೊಂದುಅಪರಾಧವನ್ನು, ನಕರೋಮಿ-ಮಾಡುವದಿಲ್ಲ, ಹೇಸುಂದರಿ-ಎಲೈ ಚಲುವೆಯಾದರಾಧೆಯೆ, ದರ್ಶನಂ-ದರ್ಶನವನ್ನು, ದೇಹಿ-ಕೊಡು, ಮನ್ಮಥೇನ--ಮನ್ಮಥನಿಂದ, ದುನೋಮಿ-ಸಂತಾಪಪಡುತ್ತೇನೆ, ಹರಿಹರಿ-ಕಷ್ಟಕಷ್ಟ.

ವರ್ಣಿತಂಜಯದೇವಕೇನಹರೇರಿದಂಪ್ರವಣೇನ|ತಿಂದುಬಿಲ್ವಸಮುದ್ರಸಂಭವರೋಹಿಣೀರಮಣೇನ|| ಹರಿಹರಿ. ಟೀ. ಇದಂ-ಈ ಗೀತವು, ಹರೇಃ-ಶ್ರೀಕೃಷ್ಣನಿಗೆ, ಪ್ರವಣೇನ-ನಮ್ರನಾದ, ತಿಂದುಬಿಲ್ವ-ತಿಂದುಬಿಲ್ವವಂಶವೆಂಬ, ಸಮುದ್ರ-ಸಮುದ್ರದಲ್ಲಿ, ಸಂಭವ-ಹುಟ್ಟಿದವರಗಳಿಗೆ, ರೋಹಿಣೀರಮಣೇನ-ಚಂದ್ರಸ್ವರೂಪನಾದ, ಜಯದೇವಕೇನ-ಜಯದೇವನೆಂಬಕವಿಯಿಂದ, ವರ್ಣಿತಂ-ವಿವರಿಸಲ್ಪಟ್ಟಿತು. ತಾ. ಆರಾಧೆಯು ಗೋಪತರುಣೀರೊಡನೆ ಕ್ರೀಡಿಸುತಲಿದ್ದ ನನ್ನಂನೋಡಿ ಕೋಪದಿಂ ಪೊರಮಟ್ಟಳು ನಾನು ತಪ್ಪಿನ ಮಾಡುದರಿಂ ತಡೆಯಿಲ್ಲವೆಂದು ಬಳಿಕ ಶ್ರೀಕೃಷ್ಣನು ಹಂಬಲಿಸುತ ವಿವಿಧವಾದ ಪ್ರಲಾಪಗಳಂ ಗೈಯುತಲಿದ್ದನು.

ಶ್ಲೋ. ಹೃದಿಬಿಸಲತಾಹಾರೋನಾಯಂಭುಜಂಗಮನಾಯಕಃ ಕುವಲಯದಳಶ್ರೇಣೀಕಂಠನಸಾಗರಳದ್ಯುತಿಃ|| ಮಲಯಜರಜೋನೇದಂಭಸ್ಮಪ್ರಿಯಾರಹಿತೆಮಯಿಪ್ರಹರನಹರಭ್ರಾಂತ್ಯಾನಂಗಕ್ರುಧಾಕಿಮುಧಾವಸಿ|| ಟೀ. ಶ್ರೀಕೃಷ್ಣನು ಈ-ಮುರಡುಶ್ಲೋಕಂಗಳಿಂದ ಮನ್ಮಥನಂನಿಂದಿಸುತ್ತಾನೆ. ಹೇಅನಂಗ-ಎಲೈಮನ್ಮಥನೆ, ಹೃದಿ-ವಕ್ಷಸ್ಥಳದಲ್ಲಿ, ಬಿಸಲತಾಹಾರಃ ಬಿಸಲತಾ-ತಾವರೆಬಳ್ಳಿಯ, ಹಾರಃ-ಸರವೂ, ಅಯಂ-ಇದು, ಭುಜಂಗಮನಾಯಕಃ-ಸರ್ಪಶ್ರೇಷ್ಠವು, ನ-ಅಲ್ಲ, ಕಂಠೆ-ಕತ್ತಿನಲ್ಲಿ, ಕುವಲಯದಳಶ್ರೇಣೀ, ಕುವಲಯ-ಕನ್ನೈದಲೆಹೂವಿನ, ದಳ-ಗರಿಗಳ, ಶ್ರೇಣೀ-ಪಜ್ಜೆಯು, ಸಾ-ಅದು,

ಗರಳದ್ಯುತಿಃ, ಗರಳ-ವಿಷದ, ದ್ಯುತಿಃ-ಕಾಂತಿಯು, ನ-ಅಲ್ಲ, ಇದಂ-ಇದು
ಮಲಯಜರಜಃ, ಮಲಯಜ-ಶ್ರೀಗಂಧದ, ರಜಃ-ಪುಡಿಯು, ಭಸ್ಮ-ವಿಭೂ
ತಿಯು, ನ-ಅಲ್ಲ, ಪ್ರಿಯಾರಹಿತೇ, ಪ್ರಿಯಾ - ಪ್ರಾಣಕಾಂತೆಯಿಂದ, ರಹಿ
ತೆ-ಅಗಲಿರುವ, ಮಯಿ-ನನ್ನಲ್ಲಿ, ಹರಭ್ರಾಂತ್ಯಾ, ಹರ-ಈಶ್ವರನ, ಭ್ರಾಂ
ತ್ಯಾ - ಭ್ರಮೆಯಿಂದ, ನಪ್ರಹರ - ಹೊಡೆಯಬೇಡ, ಕ್ರುಧಾ - ಕೋಪ
ದಿಂದ, ಕಿಮು - ಯಾತಕ್ಕೆ, ಧಾವಸಿ - ಅಟ್ಟುತ್ತೀಯೆ. ತಾ. ಎಲೈಮನ್ಮ
ಥನೆ ವಿರಹತಾಪಶಾಂತಿಗೋಸ್ಕರ ಎದೆಯಲ್ಲಿ ತಾವರೆದಂಟಿನ ಸರವಂ ಕೊ
ರಳಲ್ಲಿ ಕನ್ನೈದಿಲೆ ಹೂವಿನಮಾಲೆಯಂ ಮೈಯಲ್ಲಿ ಶ್ರೀಗಂಧದ ಲೇಪವಂ
ಹೊಂದಿರುವ ನನ್ನಂ ಸರ್ಪಂಗಳಿಂ ದಲಂಕರಿಸಲ್ಪಟ್ಟ, ವಿಷದಿಂ ಕಪ್ಪಾದಕಂ
ಠವುಳ್ಳ ವಿಭೂತಿಯಂ ಧರಿಸಿರುವ ಈಶ್ವರನೆಂದು ತಿಳಿದು ಕೋಪದಿಂಕೊ
ಲ್ಲಬೇಡ.

ಶ್ಲೋ. ಪಾಣೌಮಾಕುರುಚೂತಸಾಯಕಮಮುಂಮಾಚಾಪಮಾರೋಪ
ಯಕ್ರೀಡಾನಿರ್ಜಿತವಿಶ್ವಮೂರ್ಛಿತಜನಾಘಾತೇನಕಿಂಪೌರುಷಂ। ತಸ್ಯಾಏವ
ಮೃಗೀದೃಶೋಮನಸಿಜಪ್ರೇಂಖತ್ಕಟಾಕ್ಷಾಶುಗಶ್ರೇಣೀಜರ್ಜರಿತಂಮನಾಗ
ಪಿಮನೋನಾದ್ಯಾಪಿಸಂಧುಕ್ಷತೇ॥ ಟೀ. ಕ್ರೀಡಾನಿರ್ಜಿತವಿಶ್ವ, ಕ್ರೀಡಾ -
ಲೀಲೆಯಿಂದ, ನಿರ್ಜಿತ-ಜೈಸಲ್ಪಟ್ಟ, ವಿಶ್ವ-ಪ್ರಪಂಚವುಳ್ಳ, ಹೇಮನಸಿಜ-ಎ
ಲೈಮನ್ಮಥನೆ, ಅಮುಂ - ಈಮುಂದೆಕಾಣುವ, ಚೂತಸಾಯಕಂ, ಚೂ
ತ- ಮಾವಿನಹೂವೆಂಬ, ಸಾಯಕಂ - ಬಾಣವನ್ನು, ಪಾಣೌ - ಕೈಯಲ್ಲಿ,
ಮಾಕುರು-ಹಿಡಿಯಬೇಡ, ಚಾಪಂ- ಬಿಲ್ಲನ್ನು, ಮಾರೋಪಯ - ಆರೋ
ಪಣಮಾಡಬೇಡ, ಮೂರ್ಛಿತಜನಾಘಾತೇನ, ಮೂರ್ಛಿತ -ವಿರಹದಿಂಮೂ
ರ್ಛೆಗೊಂಡಿರುವ, ಜನ-ಜನಗಳ, ಆಘಾತೇನ - ಹೊಡೆಯೋಣದರಿಂದ,
ಕಿಂಪೌರುಷಂ - ಯೇನುಪರಾಕ್ರಮವು, ಮೃಗೀದೃಶಃ, ಮೃಗೀ -- ಹೆ
ಣ್ಣುಜಿಂಕೆಯು, ದೃಶಃ - ಕಣ್ಣುಗಳೋಪಾದಿಯಲ್ಲಿ ಕಣ್ಣುಗಳುಳ್ಳ, ತಸ್ಯಾ
ಏ-ಅದೇರಾಧೆಯ, ಪ್ರೇಂಖತ್ಕಟಾಕ್ಷಾಶುಗಶ್ರೇಣೀಜರ್ಜರಿತಂ, ಪ್ರೇಂಖತ್-
ಅದುರುತಲಿರುವ, ಕಟಾಕ್ಷ-ಕಡೆಗಣ್ಣನೋಟವೆಂಬ, ಆಶುಗ- ಅಂಬುಗಳ,
ಶ್ರೇಣೀ-ಸಾಲುಗಳಿಂದ, ಜರ್ಜರಿತಂ-ಸಡಲಿಸಲ್ಪಟ್ಟ, ಮನಃ - ಮನಸ್ಸು,
ಅದ್ಯಾಪಿ-ಈಗಲೂಕೂಡ, ಮನಾಗಪಿ-ಸ್ವಲ್ಪವೂ, ನಸಂಧುಕ್ಷತೇ - ಶೇರು
ವದಿಲ್ಲ. ತಾ. ಎಲೈ ಮನ್ಮಥನೆ ಮೊದಲೆ ಆರಾಧೆಯ ಕಡೆಗಣ್ಣು
ನೋಟವೆಂಬ ಬಾಣದಿಂ ಪೆಟ್ಟಂ ತಿಂದು ಮೂರ್ಛೆಗೊಳುತಲಿರುವ ನ
ನ್ನಂ ಕೊಲ್ಲುವದು ಲೀಲಾ ಮಾತ್ರದಿಂ ಪ್ರಪಂಚವಂ ಜೈಸುವ ನಿನಗೆ

ಯೇನುಮಹಾಪರಾಕ್ರಮವೆಂದೆಣಿಸುತ್ತೀಯೆ.

ಶ್ಲೋ. ಭ್ರೂಚಾಪೇನಿಹಿತಃಕಟಾಕ್ಷವಿಶಿಖೋನಿರ್ಮಾತುಮರ್ಮವ್ಯಥಾಂ ಶ್ಯಾಮಾತ್ಮಾಕುಟಿಲಃಕರೋತುಕಬರೀಭಾರೋಪಿಮಾರೋದ್ಯಮಂ॥ ಮೋಹಂ ತಾವದಯಂಚತನ್ವಿತನುತಾಂಬಿಂಬಾಧರೋರಾಗವಾನ್ ಸದ್ವೃತ್ತಸ್ತನಮಂಡಲಂತವಕಥಂಪ್ರಾಣೈರ್ಮಮಕ್ರೀಡತಿ॥ ಕೃಷ್ಣನುರಾಧೆಯಂಕುರಿತುತನ್ನ ವಿರಹವ್ಯಥೆಯಂ ಪೇಳುತ್ತಾನೆ. ಟೀ. ಹೇತನ್ವಿ – ಎಲೈಕೃಶಾಂಗಿಯಾದ ರಾಧೆಯೆ, ತವ–ನಿನ್ನ, ಭ್ರೂಚಾಪೆ, ಭ್ರೂ–ಹುಬ್ಬುಗಳೆಂಬ, ಚಾಪೆ–ಬಿಲ್ಲಿ, ನಿಹಿತಃ–ಇರಸಲ್ಪಟ್ಟ, ಕಟಾಕ್ಷವಿಶಿಖಃ, ಕಟಾಕ್ಷ–ಕಡೆಗಣ್ಣೋಟವೆಂಬ ವಿಶಿಖಃ – ಬಾಣವು, ಮರ್ಮವ್ಯಥಾಂ, ಮರ್ಮ – ಮರ್ಮಸ್ಥಾನದಲ್ಲಿಂಟಾದ ವ್ಯಥಾಂ – ಬಾಧೆಯನ್ನು, ನಿರ್ಮಾತು – ಉಂಟುಮಾಡಲಿ, ಶ್ಯಾಮಾತ್ಮಾ ಶ್ಯಾಮಾ – ಕಪ್ಪಾದ, (ದೋಷಯುಕ್ತವಾದ) ಆತ್ಮಾ – ಸ್ವರೂಪವುಳ್ಳ, ಕುಟಿಲಃ– ವಕ್ರವಾದ (ಕಪಟೆಯಾದ) ಕಬರೀಭಾರೋಪಿ – ತಲೆಗೂದಲೂ, ಮಾರೋದ್ಯಮಂ, ಮಾರ – ಮನ್ಮಥನ ( ಮರಣಾದ ) ಉದ್ಯಮಂ – ಉದ್ಯೋಗವನ್ನು, ಕರೋತು–ಮಾಡಲಿ, ರಾಗವಾನ್ – ಕೆಂಪಾದ ( ಕಾಮಿಯಾದ) ಅಯಂಬಿಂಬಾಧರಃ, ಈ ತೊಂಡೆಹಣ್ಣಿಂತಿರುವ ತುಟಿಯುಕೂಡ, ಮೋಹಂ– ಮೂರ್ಛೆಯನ್ನು, ( ಭ್ರಮೆಯನ್ನು ) ತನುತಾಂ – ಮಾಡಲಿ, ಸದ್ವೃತ್ತಸ್ತನಮಂಡಲಂ, ಸತ್–ನವೀನವಾದ, ವೃತ್ತ–ವರ್ತುಳವಾದ, ಸದ್ವೃತ್ತ–ಸಚ್ಚರಿತ್ರವುಳ್ಳ, ಸ್ತನಮಂಡಲಂ–ಕುಚಮಂಡಲವು, ಕಥಂ–ಹ್ಯಾಗೆತಾನೆ, ಮಮ–ನನ್ನ, ಪ್ರಾಣೈಸ್ಸಹ– ಪ್ರಾಣಗಳೊಡನೇಕೂಡಾ, ಕ್ರೀಡತಿ–ಆಡುತಲಿಧೆ.

ಶ್ಲೋಪತಾ. ಎಲೈರಾಧೆಯೆ ನಿನ್ನಕಟಾಕ್ಷಂಗಳು ಮನ್ಮಥನ ಬಾಣದಂತೆ ತೀಕ್ಷ್ಣವಾದುದರಿಂದಲುಂ ಕೇಶಪಾಶಂಗಳು ಕೃತ್ರಿಮಿಯಾಗಿಯು ದೋಷಯುಕ್ತವಾಗಿಯು ಇರುವದ್ದರಿಂದಲುಂ ತುಟಿಯು ಕಾಮಿಯಾಗಿರುವದ್ದರಿಂದಲು– ನನ್ನಂ ಹಿಂಸೆಗೊಳಿಸುವದು ಯುಕ್ತವೇಸರಿ॥ ಸಚ್ಚರಿತ್ರವುಳ್ಳ ನಿನ್ನ ಕುಚಗಳೊಕೂಡ ಪೀಡಿಸುತಲಿರುವದೇನು ವಿಚಿತ್ರವಾಗಿಧೆ ॥ ಮುಖ್ಯತಾತ್ಪರ್ಯ. ಎಲೈ ರಾಧೆಯೆ ದೀರ್ಘವಾದ ನಿನ್ನ ಕಟಾಕ್ಷಂಗಳು ಕಪ್ಪಾದ ನಿನ್ನ ಸುಳಿಗೂದಲುಗಳೂ ಕೆಂಪಾದ ನಿನ್ನ ತುಟಿಯೂ ದುಂಡಾಗಿರುವ ನಿನ್ನ ಕುಚಗಳೂ ಈಗ ನಿನ್ನ ಮಗಲಿರುವನನಗೆ ಬಹಳವ್ಯಥೆಯನ್ನುಂಟುಮಾಡುತಲಿವೆ.

ಶ್ಲೋ. ತಾನಿಸ್ಪರ್ಶಸುಖಾನಿತೇಚತರಲಾಸ್ಸ್ನಿಗ್ಧಾದೃಶೋರ್ವಿಭ್ರಮಾಸ್ತದ್ವ

ಕ್ತ್ರಾಂಬುಜಸೌರಭಂಸಚಸುಧಾಸ್ಯಂದೀಗಿರಾಂವಕ್ರಿಮಾ॥ ಸ್ಫಾಬಿಂಬಾಧರಮಾ
ಧುರೀತಿವಿಷಯಾಸಂಗೇ ಪಿಚೇನ್ಮಾನಸಂತಸ್ಯಾಂಲಗ್ನಸಮಾಧಿಹಂತವಿರಹವ್ಯಾ
ಧಿಃಕಥಂವರ್ತತೇ ॥ ಕೃಷ್ಣನುರಾಧಾವಿರಹಮಂತನ್ನೊಳುತಾನೆಆಲೋಚಿಸು
ತ್ತಾನೆ. ಟೀ. ಸ್ಪರ್ಶಸುಖಾನಿ, ಸ್ಪರ್ಶ - ಮುಟ್ಟೋಣದರಿಂದುಂಟಾದ, ಸು
ಖಾನಿ-ಸುಖಗಳು, ತಾನಿ-ಅಂಥಾವುಗಳು, ತರಳಾಃ- ಚಂಚಲಂಗಳಾದ, ಸ್ನಿ
ಗ್ಧಾಃ-ಮನೋಹರಂಗಳಾದ, ದೃಶೋಃ-ಕಣ್ಣುಗಳ, ವಿಭ್ರಮಾಅಪಿ-ವಿಲಾಸಂ
ಗಳೂಕೂಡ, ತೇ-ಅಂಥಾವುಗಳು, ವಕ್ತ್ರಾಂಬುಜಸೌರಂಭಂ, ವಕ್ತ್ರಾಂಬು
ಜ-ಮುಖಕಮಲದ, ಸೌರಭಂ-ಪರಿಮಳವು, ತತ್-ಅಂಥಾದ್ದು, ಸುಧಾ
ಸ್ಯಂದೀ, ಸುಧಾ - ಅಮೃತವನ್ನು, ಸ್ಯಂದೀ- ಸುರಿಯುತಲಿರುವ, ಗಿರಾಂ-
ಮಾತುಗಳ, ವಕ್ರಿಮಾಚ - ಚಾತುರ್ಯವೂಕೂಡ, ಸಃ-ಅಂಥಾದ್ದು, ಬಿಂ
ಬಾಧರಮಾಧುರೀ, ಬಿಂಬಾಧರ - ತೊಂಡೆಹಣ್ಣಂತಿರುವ ತುಟಿಯು, ಮಾ
ಧುರೀ-ಸವಿಯು, ಸಾ-ಅಂಥಾದ್ದು, ಇತಿ- ಈ ಪರಿಯಾಗಿ, ಮಾನಸಂ-ಮನ
ಸ್ಸು, ವಿಷಯಾಸಂಗೇ- ವಿಷಯ - ಇಂದ್ರಿಯಗಳಿಗೆಸುಖವನ್ನುಂಟುಮಾಡು
ವ ವಸ್ತುಗಳ, ಆಸಂಗೇ-ಆಸಕ್ತಿಯಲ್ಲಿ, ತಸ್ಯಾಂ-ಆರಾಧೆಯಲ್ಲಿ, ಲಗ್ನಸಮಾ
ಧಿ, ಲಗ್ನ - ಸಂಬಂಧಿಸಿಕೊಂಡಿರುವ, ಸಮಾಧಿ- ಧ್ಯಾನವಿಶೇಷವುಳ್ಳದ್ದಾ
ಗಿ, ಚೇದಪಿ - ಇದ್ದಾಗ್ಯೂ, ವಿರಹವ್ಯಾಧಿಃ, ವಿರಹ - ವಿಯೋಗದಿಂದುಂ
ಟಾದ, ವ್ಯಾದಿಃ-ರೋಗವು, ಕಥಂ-ಹ್ಯಾಗೆತಾನೆ, ವರ್ತತೇ- ಇರುತಲಿಧೆ.

ತಾ. ನನ್ನ ಮನಸ್ಸು ತ್ವಕ್‌ಚಕ್ಷುಸ್ಸುಘ್ರಾಣಶ್ರೋತ್ರರಸನ ಆ
ವುಗಳೆಂಬ ಪಂಚೇಂದ್ರಿಯಗಳಿಗೂ ಸುಖವನ್ನುಂಟು ಮಾಡುವ ಆ ರಾಧೆ
ಯ ಅವಯವಂಗಳಂ ಶೃಂಗಾರ ಚೇಷ್ಟಗಳಂ ಮುಖದ ವಾಸನೆಯಂ ಮಾ
ತಿನ ಚಾತುರ್ಯಮಂ ತುಟಿಯ ಸವಿಯಂ ನೆನಸುತ ಸಂತೋಷಪಡುತ ಲಿ
ದ್ದಾಗ್ಯೂ ಅವಳ ವಿರಹದಿಂದುಂಟಾದ ಬಾಧೆಯು ಹ್ಯಾಗತಾನೇ ಪ್ರಾ
ಪ್ತವಾಗಿಧೆ.

ಶ್ಲೋ. ಭ್ರೂಪಲ್ಲವಂಧನುರಪಾಂಗತರಂಗಿತಾನಿಬಾಣಾಗುಣಶ್ರವಣಪಾ
ಳಿರಿತಿಸ್ಮರೇಣ॥ ತಸ್ಯಾಮನಂಗಜಯಜಂಗಮದೇವತಾಯಾಮಸ್ತ್ರಾಣಿನಿರ್ಜಿತ
ಜಗಂತಿಕಿಮರ್ಪಿತಾನಿ॥ ಟೀ. ಭ್ರೂಪಲ್ಲವಂ - ತಳಿರಂತಿರುವ, ಹುಬ್ಬೆಂಧ
ನುಃ-ಬಿಲ್ಲು, ಅಪಾಂಗತರಂಗಿತಾನಿ-ಕಡೆಗಣ್ಣು ನೋಟಂಗಳ, ಬಾಣಾಃ-ಬಾ
ಣಂಗಳು, ಶ್ರವಣಪಾಳಿಃ, ಶ್ರವಣ-ಕಿವಿಯ, ಪಾಳಿಃ-ಗುರುತ, ಗುಣಃ-ಮೌ
ರ್ವಿಯು, ಇತಿ- ಈಪರಿಯಲ್ಲಿ, ಸ್ಮರೇಣ - ಕಾಮನಿಂದ, ನಿರ್ಜಿತಜಗಂತಿ, ನಿ
ರ್ಜಿತ-ಜೈಸಲ್ಪಟ್ಟ, ಜಗಂತಿ- ಲೋಕಗಳುಳ್ಳ, ಅಸ್ತ್ರಾಣಿ - ಆಯುಧಗಳು,

ಅನಂಗಜಯಜಂಗಮದೇವತಾಯಾಂ, ಅನಂಗ- ಮನ್ಮಥನ, ಜಯ - ಜಯ
ಕ್ಕೆ, ಜಂಗಮ- ತಿರುಗಾಡುತಲಿರುವ, ದೇವತಾಯಾಂ - ದೇವತಾಸ್ವರೂಪಿಣಿ
ಯಾದ, ತಸ್ಯಾಂ - ಆರಾಧೆಯಲ್ಲಿ, ಅರ್ಪಿತಾನಿ ಕಿಂ - ಇರಿಸಲ್ಪಟ್ಟವೋ ಯೇ
ನು. ತಾ. ಅನಂಗಜಯಮಂಗಳ ದೇವತೆಯಾದ ಆ ರಾಧೆಯ ಪುರ್ಬ್ಬಗಳು
ಕಟಾಕ್ಷಂಗಳು ಕರ್ಣಗಳು ಜಗತ್ತಿಗೆ ಮೋಹವನ್ನುಂಟುಮಾಡುವವು.

ಗೀತಗೋವಿಂದ ಮಹಾಕಾವ್ಯದ ರಸಿಕರಂಜನೀಯೆಂಬ
ಟೀಕಿನೊಳ್ ಮೂರನೇಸರ್ಗಸಂಪೂರ್ಣವಾದುದು.

ಶ್ಲೋ. ಯಮುನಾತೀರವಾನೀರನಿಕುಂಜೇ ಮಂದಮಾಸ್ಥಿತಂ| ಪ್ರಾಹ ಪ್ರೇಮ
ಭಯೊದ್ಭ್ರಾಂತಂ ಮಾಧವಂ ರಾಧಿಕಾಸಖೀ॥ ಟೀ. ಯಮುನಾತೀರವಾನೀ
ರನಿಕುಂಜೇ, ಯಮುನಾ - ಕಾಳಿಂದಿಯ, ತೀರ - ದಡದಲ್ಲಿರುವ, ವಾನೀರ -
ನೀರವಂಜೀವೃಕ್ಷದ, ನಿಕುಂಜೇ-ಲತಾಗೃಹದಲ್ಲಿ, ಆಸ್ಥಿತಂ - ಕೂತುಕೊಂಡಿ
ರುವ, ಪ್ರೇಮಭಯೊದ್ಭ್ರಾಂತಂ, ಪ್ರೇಮ-ಪ್ರೀತಿಯಿಂದಲೂ, ಭಯ-ಭೀ
ತಿಯಿಂದಲೂ, ಉದ್ಭ್ರಾಂತಂ-ಭ್ರಮಿಸುತಲಿರುವ, ಮಾಧವಂ - ಕೃಷ್ಣನಂ
ಕುರಿತು, ರಾಧಿಕಾಸಖೀ, ರಾಧಿಕಾ - ರಾಧಾದೇವಿಯ, ಸಖೀ - ಕೆಳದಿಯು
ಮಂದಂ-ಮೆಲ್ಲಗೆ, ಪ್ರಾಹ-ಹೇಳಿದಳು. ತಾ. ಕಾಳಿಂದೀನದಿಯ ದಡದಪೊ
ದರಿನೊಳ್ ಕುಳಿತು ತಾನು ಮಾಡಿದ ಅಪರಾಧದಿಂದುಂಟಾದ ಭಯದಿಂದ
ಲೂ ರಾಧಾವಿಷಯವಾದ ಪ್ರೀತಿಯಿಂದಲೂ ಉನ್ಮತ್ತನಂತಿರುವ ಶ್ರೀಕೃ
ಷ್ಣನಂ ಕುರಿತು ದೂತಿಯು ಇಂತೆಂದಳು.

ಅಷ್ಟಮಾಷ್ಟಪದೀ ಪ್ರಾರಂಭಃ ರಾಗ-ಸೌರಾಷ್ಟ್ರ.

ನಿಂದತಿ ಚಂದನಮಿಂದುಕಿರಣಮನುವಿಂದತಿ ಖೇದಮಧೀರಂ| ವ್ಯಾಳನಿಲಯ
ಮಿಳನೇನಗರಳಮಿವಕಲಯತಿಮಲಯಸಮೀರಂ॥ ಪ॥ ಸಾವಿರಹೇತವದೀನಾಕೃ
ಷ್ಣ ಸಾವಿರಹೇತವದೀನಾ ಮಾಧವಮನಸಿಜವಿಶಿಖಭಯಾದಿವಭಾವನಯಾತ್ವಯಿ
ಲೀನಾ ಸಾವಿರಹೇತವದೀನಾಕೃಷ್ಣ ಸಾವಿರಹೇತವದೀನಾ॥ ಟೀ. ಮಾಧವ- ಲ
ಕ್ಷ್ಮೀಪತಿಯಾದ, ಹೇಕೃಷ್ಣ-ಎಲೈಕೃಷ್ಣನೆ, ತವ-ನಿನ್ನ, ವಿರಹೇ- ವಿಯೋ
ಗದಲ್ಲಿ, ದೀನಾ-ದೀನಳಾದ, ಮನಸಿಜವಿಶಿಖಭಯಾದಿವ, ಮನಸಿಜ-ಮನ್ಮಥ
ನ, ವಿಶಿಖ-ಬಾಣದ್ದೆಸೆಯಿಂದುಂಟಾದ, ಭಯಾದಿವ-ಹೆದರಿಕೆದೆಸೆಯಿಂದಲೋ
ಎಂಬಂತೆ, ಭಾವನಯಾ-ಅನುಸಂಧಾನದಿಂದ, ತ್ವಯಿ-ನಿನ್ನಲ್ಲಿ, ಲೀನಾ-ಅಡ
ಗಿಕೊಂಡಿರುವ, ಸಾ-ಆರಾಧೆಯು, ಚಂದನಂ-ಶ್ರೀಗಂಧವನ್ನು, ಇಂದುಕಿ
ರಣಂ, ಇಂದು-ಚಂದ್ರನ, ಕಿರಣಂ-ಕಾಂತಿಯನ್ನು, ನಿಂದತಿ- ದೂಷಿಸುತ್ತ
ಾಳೆ, ಅಧೀರಂ - ಧೈರ್ಯವಿಲ್ಲದೆ ಇರೋಣ ಹ್ಯಾಗೋಹಾಗೆ, ಖೇದಂ-

ದುಃಖವನ್ನು, ಅನುವಿಂದತಿ - ಹೊಂದುತಲಿಧಾಳೆ, ಮಲಯಸಮೀರಂ, ಮ
ಲಯ - ಮಲಯಪರ್ವತದ, ಸಮೀರಂ - ಘಾಳಿಯನ್ನು, ವ್ಯಾಳನಿಲಯಮಿ
ಳನೇನೇವ, ವ್ಯಾಳ - ಸರ್ಪಗಳಿಗೆ, ನಿಲಯ — ಮನೆಯಾದ ಚಂದನವೃ
ಕ್ಷದ, ಮಿಳನೇನೇವ - ಸಂಬಂಧದಿಂದಲೋ ಯೆಂಬಂತೆ, ಗರಳಂ - ವಿಷ
ವನ್ನಾಗಿ, ಕಲಯತಿ-ಎಣಿಸುತ್ತಾಳೆ.

ಅವಿರಳನಿಪತಿತಮದನಶರಾದಿವಭವದವನಾಯವಿಶಾಲಂ। ಸ್ವಹೃದಯಮ
ರ್ಮಣಿವರ್ಮಕರೋತಿಸಜಲನಳಿನೀದಳಜಾಲಂ. ಸಾವಿರಹೇ. ಟೀ. ಸಾ-ಆರಾ
ಧೆಯು, ಸ್ವಹೃದಯಮರ್ಮಣಿ, ಸ್ವ-ತನ್ನ, ಹೃದಯ - ವಕ್ಷಸ್ಥಳವೆಂಬ,
ಮರ್ಮಣಿ - ಜೀವಸ್ಥಾನದಲ್ಲಿ, ಅವಿರಳನಿಪತಿತಮದನಶರಾತ್, ಅವಿರಳ -
ದಟ್ಟವಾಗಿ, ನಿಪತಿತ - ಬೀಳುತಲಿರುವ, ಮದನ - ಮನ್ಮಥನ, ಶರಾತ್ -
ಬಾಣದ್ದೆಸೆಯಿಂದ, ಭವದವನಾಯೇವ, ಭವತ್ - ಮನಸ್ಸಿನಲ್ಲಿರುವನಿನ್ನ,
ಅವನಾಯೇವ- ಸಂರಕ್ಷಣೆಗೋಸ್ಕರಲೋಯೆಂಬಂತೆ, ವಿಶಾಲಂ- ವಿಸ್ತಾ
ರವಾದ, ಸಜಲನಳಿನೀದಳಜಾಲಂ, ಸಜಲ - ನೀರೊಡಗೂಡಿದ, ನಳಿನೀ -
ತಾವರೆಯ, ದಳ- ಎಲೆಗಳ, ಜಾಲಂ-ಸಮೂಹವನ್ನು, ವರ್ಮ - ಕವಚವ
ನ್ನಾಗಿ, ಕರೋತಿ-ಮಾಡುತಲಿಧಾಳೆ.

ಕುಸುಮವಿಶಿಖಶರತಲ್ಪಮನಲ್ಪವಿಲಾಸಕಳಾಕಮನೀಯಂ। ವ್ರತಮಿವತವಪ
ರಿರಂಭಸುಖಾಯಕರೋತಿಕುಸುಮಶಯನೀಯಂ. ಸಾವಿರಹೇ. ಟೀ. ಸಾ-
ಅರಾಧೆಯು, ಕುಸುಮವಿಶಿಖಶರತಲ್ಪಂ, ಕುಸುಮವಿಶಿಖ - ಮನ್ಮಥನ,
ಶರ-ಬಾಣಗಳ, ತಲ್ಪಂ - ಹಾಸಿಗೆರೂಪವಾದ, ಅನಲ್ಪವಿಲಾಸಕಳಾಕಮ
ನೀಯಂ, ಅನಲ್ಪ- ಅಧಿಕವಾದ, ವಿಲಾಸಕಳಾ - ಶೃಂಗಾರಕಳೆಗಳಿಂದ, ಕ
ಮನೀಯಂ - ಅಪೇಕ್ಷಿಸಲು ಯೋಗ್ಯವಾದ, ಕುಸುಮಶಯನೀಯಂ, ಕು
ಸುಮ-ಹೂವುಗಳ, ಶಯನೀಯಂ-ಹಾಸಿಗೆಯನ್ನು, ತವ-ನಿನ್ನ, ಪರಿರಂಭ
ಸುಖಾಯ, ಪರಿರಂಭ - ಆಲಿಂಗನದ, ಸುಖಾಯ.- ಸೌಖ್ಯಕ್ಕೋಸ್ಕರ,
ವ್ರತಮಿವ-ವ್ರತವನ್ನೋಪಾದಿಯಲ್ಲಿ, ಕರೋತಿ-ಮಾಡುತಲಿಧಾಳೆ.

ವಹತಿಚಗಳಿತವಿಲೋಚನಜಲಧರಮಾನನಕಮಲಮುದಾರಂ ವಿಧುಮಿವವಿ
ಕಟವಿಧುಂತುದದಂತದಳನಗಳಿತಾಮೃತಧಾರಂ. ಗಾವಿರಹೇ. ಟೀ. ಸಾ-ಆ
ರಾಧೆಯು, ಗಳಿತವಿಲೋಚನಜಲಧರಂ, ಗಳಿತ - ಸುರಿದಿರುವ, ವಿಲೋಚ
ನಜಲ-ಕಂಣೀರುಗಳಂನು, ಧರಂ-ಧರಿಶಿರುವ, ಉದಾರಂ-ಉತ್ಕೃಷ್ಟವಾದ,
ಆನನಕಮಲಂ-ಕಮಲದಂತಿರುವಮುಖವನ್ನು, ವಿಕಟವಿಧುಂತುದದಂತದಳ
ನಗಳಿತಾಮೃತಧಾರಂ, ವಿಕಟ -- ವಿಸ್ತಾರವಾದ, ವಿಧುಂತುದ -- ರಾಹ

ವಿನ, ದಂತ-ಹಲ್ಲುಗಳಿಂದ, ದಳನ - ಸೀಳೋಣದರಿಂ, ಗಳಿತ - ಸ್ರವಿಸುತಲಿರುವ, ಅಮೃತ-ಅಮೃತದ, ಧಾರಾ-ಪ್ರವಾಹವುಳ್ಳ, ವಿಧುಬಿಂಬ-ಚಂದ್ರನನ್ನೋಪಾದಿಯಲ್ಲಿ, ವಹತಿ-ಧರಿಸುತಲಿಧಾಳೆ.

ವಿಲಿಖತಿರಹಸಿಕುರಂಗಮದೇನಭವಂತಮಸಮಶರಭೂತಂ|ಪ್ರಣಮತಿಮಕರಮಥೋವಿನಿಧಾಯಕರೇಚಶರಂನವಚೂತಂ. ಸಾವಿರಹೆ. ಟೀ. ಸಾ-ಆರಾಧೆಯು, ರಹಸಿ-ಏಕಾಂತದಲ್ಲಿ, ಕುರಂಗಮದೇನ-ಕಸ್ತೂರಿಯಿಂದ, ಭವಂತಂ - ನಿನ್ನನ್ನು, ಅಸಮಶರಭೂತಂ- ಮನ್ಮಥನನ್ನಾಗಿ, ವಿಲಿಖತಿ - ಬರಯುತ್ತಾಳೆ, ಅಥೋ-ಅನಂತರದಲ್ಲಿ, ಕರೆ- ಕೈಯಲ್ಲಿ, ನವಚೂತಂ, ನವ-ನೂತನವಾದ, ಚೂತಂ-ಮಾವಿನಪುಷ್ಪವೆಂಬ, ಶರಂ-ಬಾಣವನ್ನು, ಮಕರಂಚ - ಮೊಸಳೆಯನ್ನೂಕೂಡ, ವಿನಿಧಾಯ - ಇರಿಸಿ, ಪ್ರಣಮತಿ -- ನಮಸ್ಕರಿಸುತ್ತಾಳೆ.

ಪ್ರತಿಪದಮಿದಮಪಿನಿಗದತಿಮಾಧವತವಚರಣೇಪತಿತಾಹಂ|ತ್ವಯಿವಿಮುಖೇಮಯಿಸಪದಿಸುಧಾನಿಧಿರಪಿತನುತೇತನುದಾಹಂ. ಸಾವಿರಹೆ. ಟೀ. ಹೇಮಾಧವ-ಎಲೈಕೃಷ್ಣನೆ, ಅಹಂ-ನಾನು, ತವ-ನಿನ್ನ, ಚರಣೇ-ಪಾದದಲ್ಲಿ, ಪತಿತಾ-ಬಿದ್ದಂಥಾವಳು, ತ್ವಯಿ-ನೀನು, ವಿಮುಖೇಸತಿ -ಪರಾಙ್ಮುಖನಾಗುತಿರಲಾಗಿ, ಸುಧಾನಿಧಿರಪಿ - ಅಮೃತಮಯನಾದ ಚಂದ್ರನೂಕೂಡ, ಮಯಿ - ನನ್ನಲ್ಲಿ, ಅತನುದಾಹಂ, ಅತನು - ಅಧಿಕವಾದ, ದಾಹಂ - ಸಂತಾಪವನ್ನು, ತನುತೆ-ಮಾಡುತಲಿಧಾನೆ, ಇದಂ-ಈವಾರ್ತೆಯನ್ನು, ಸಾ - ಆ ರಾಧೆಯು, ಪ್ರತಿಪದಮಪಿ-ಪ್ರತಿಕ್ಷಣದಲ್ಲೂ, ನಿಗದತಿ-ಹೇಳುತಲಿಧಾಳೆ.

ಧ್ಯಾನಲಯೇನಪುರಃಪರಿಕಲ್ಪ್ಯಭವಂತಮತೀವದುರಾಪಂ|ವಿಲಪತಿಹಸತಿವಿಷೀದತಿರೋದಿತಿಭ್ರಮತಿವಿಮುಂಚತಿತಾಪಂ. ಸಾವಿರಹೆ. ಟೀ. ಸಾ-ಆರಾಧೆಯು, ಅತೀವ-ಅತ್ಯಂತವಾಗಿ, ದುರಾಪಂ- ಹೊಂದಲಶಕ್ಯನಾದ, ಭವಂತಂ-ನಿನ್ನನು, ಧ್ಯಾನಾಲಯೇನ, ಧ್ಯಾನ-ಸ್ಮರಣೆಯು, ಲಯೇನ-ಚಿತ್ತೈಕಾಗ್ರತೆಯಿಂದಾ, ಪುರಃ-ಮುಂಭಾಗದೊಳ್, ಪರಿಕಲ್ಪ್ಯ-ಕಲ್ಪಿಸಿ, ವಿಲಪತಿ-ಪ್ರಲಾಪಿಸುತ್ತಾಳೆ, ವಿಷೀದತಿ-ದುಃಖಪಡುತ್ತಾಳೆ, ಹಸತಿ- ನಗುತಲಿಧಾಳೆ, ರೋದತಿ-ಅಳುತಲಿಧಾಳೆ, ಭ್ರಮತಿ-ಭ್ರಮಿಸುತಲಿಧಾಳೆ, ತಾಪಂ-ಸಂತಾಪವನ್ನು, ವಿಮುಂಚತಿ-ಬಿಡುತಲಿದಾಳೆ.

ಶ್ರೀಜಯದೇವಭಣಿತಮಿದಮಧಿಕಂಯದಿಮನಸಾನಟನೀಯಂ|ಹರಿವಿರಹಾಕುಲವಲ್ಲವಯುವತಿಸಖೀವಚನಂಪಠನೀಯಂ||ಸಾವಿರಹೆತವದೀನಾಕೃಷ್ಣ ಸಾವಿರಹೆತವದೀನಾ|ಮಾಧವಮನಸಿಜವಿಶಿಖಭಯಾದಿವಭಾವನಯಾತ್ವಯಿಲೀನಾ

ಟೀ. ಮನಸಾ-ಮನಸ್ಸಿನಿಂದ, ಅಧಿಕಂ-ಹೆಚ್ಚಾಗಿ, ನಟನೀಯಂಯದಿ--
ಸಂತೋಷಪಡಬೇಕಾದರೆ, ಶ್ರೀಜಯದೇವಭಣಿತಂ, ಶ್ರೀಜಯದೇವ - ಜ
ಯದೇವನೆಂಬಕವಿಯಿಂದ, ಭಣಿತಂ - ಹೇಳಲ್ಪಟ್ಟ, ಇದಂ - ಈ, ಹರಿವಿ
ರಹಾಕುಲವಲ್ಲವಯುವತಿಸಖೀವಚನಂ, ಹರಿ - ಶ್ರೀಕೃಷ್ಣನ, ವಿರಹ - ವಿ
ಯೋಗದಿಂದ, ಆಕುಲ-ವ್ಯಾಕುಲಳಾದ, ವಲ್ಲವಯುವತಿ - ಗೋಪತರುಣಿ
ಯಾದರಾಧೆಯ, ಸಖೀ-ಕೆಳದಿಯ, ವಚನಂ- ವಾಕ್ಯ, ಪಠನೀಯಂ-ಪಠಿ
ಸಲುಯೋಗ್ಯವಾದುದು. ತಾ. ಎಲೈ ಕೃಷ್ಣನೇ ನಿನ್ನ ವಿರಹದಿಂದಾ ವಲ್ಲ
ವಯುವತಿಯು ಪಲ್ಲವಶಯನ ಬೆಳ್ದಿಂಗಳು ಮೊದಲಾದವುಗಳಂ ಕೂಡಾವಿ
ರೋಧಿಗಳನ್ನಾಗಿ ತಿಳಿಯುತ ನಿನ್ನನ್ನೇ ಪರಪರಿಯಾಗಿ ಚಿಂತಿಸುತ ದುಃಖ
ಪಡುತಲಿಧಾಳೆಂದು ಕೆಳದಿಯು ಪೇಳಿದಳು.

ಶ್ಲೋ. ಆವಾಸೋವಿಪಿನಾಯತೇಪ್ರಿಯಸಖೀಮಾಲಾಪಿಜಾಲಾಯತೇತಾಪೋನಿ
ಶ್ವಸಿತೇನದಾವದಹನಜ್ವಾಲಾಕರಾಳಾಯತೇ।ಸಾಪಿತ್ವದ್ವಿರಹೇಣಹಂತಹರಿಣೀ
ರೂಪಾಯತೇಹಾಕಥಂಕಂದರ್ಪೋಪಿಯಮಾಯತೇವಿರಚಯನ್ ಶಾರ್ದೂಲವಿ
ಕ್ರೀಡಿತಂ॥ ಟೀ. ತ್ವದ್ವಿರಹೇಣ, ತ್ವತ್-ನಿನ್ನ, ವಿರಹೇಣ-ವಿಯೋಗದಿಂ
ದ, ಆವಾಸಃ-ವಾಸಸ್ಥಾನವು, ವಿಪಿನಾಯತೇ-ಅರಣ್ಯದೋಪಾದಿಯಲ್ಲಿ, ಆ
ಚರಿಸುತಲಿಧೆ, ಪ್ರಿಯಸಖೀಮಾಲಾಪಿ, ಪ್ರಿಯ-ಇಷ್ಟರಾದ, ಸಖೀ-ಕೆಳದಿ
ಯರ, ಮಾಲಾಪಿ-ಪರಂಪರೆಯೂಕೂಡ, ಜಾಲಾಯತೇ- ಬಲೆಯೋಪಾದಿ
ಯಲ್ಲಿಆಚರಿಸುತಲಿಧೆ, ತಾಪಃ-ಸಂತಾಪವು, ನಿಶ್ವಸಿತೇನ-ನಿಟ್ಟುಸಿರಿಂದ,
ದಾವದಹನಜ್ವಾಲಾಕರಾಳಾಯತೇ, ದಾವದಹನ-ಕಾಡಿಗಿಚ್ಚಿನ, ಜ್ವಾಲಾ-ಉ
ರಿಯೋಪಾದಿಯಲ್ಲಿ, ಕರಾಳಾಯತೇ-ಕ್ರೂರವಾಗಿಧೆ, ಸಾಪಿ- ಆರಾಧೆಯೂ
ಕೂಡ, ಹರಿಣೀರೂಪಾಯತೇ- ಹೆಣ್ಣುಜಿಂಕೆಯೋಪಾದಿಯಲ್ಲಿ ಆಚರಿಸುತಲಿ
ಧಾಳೆ, ಹಂತ-ಕಷ್ಟವು, ಕಂದರ್ಪೋಪಿ- ಮನ್ಮಥನೂಕೂಡ, ಶಾರ್ದೂಲವಿ
ಕ್ರೀಡಿತಂ, ಶಾರ್ದೂಲ-ಪುಲಿಯ, ವಿಕ್ರೀಡಿತಂ-ಕ್ರೀಡೆಯನ್ನು, ವಿರಚ
ಯನ್-ಮಾಡುತಲಿರುವನಾಗಿ, ಯಮಾಯತೇ-ಯಮನೋಪಾದಿಯಲ್ಲಿ ಆಚರಿ
ಸುತ್ತಾನೆ, ಹಾ-ಕಷ್ಟ, ಕಥಂ-ಇನ್ನುಹ್ಯಾಗೆ. ತಾ ಎಲೈಕೃಷ್ಣನೆ ಆರಾ
ಧೆಯು ನಿನ್ನವಿರಹದಿಂ ಅರಣ್ಯದಲ್ಲಿ ಬಲೆಯೋಳ್ ಶಿಲುಕಿ ಕಾಡುಗಿಚ್ಚಿನಿಂದ
ತಪಿಸುತಲಿರುವ ಮತ್ತು ಪುಲಿಯಿಂದಲೂ ಪಿಡಿಯಲ್ಪಟ್ಟ ಹೆಣ್ಣುಜಿಂಕೆಯಂ
ತೆ ಹಂಬಲಿಸುತಲಿಧಾಳೆ.

ನವಮಾಷ್ಟಪದೀ ಪ್ರಾರಂಭಃ ರಾಗ-ಧನಾಶರಿ.

ಸ್ತನವಿನಿಹಿತಮಪಿಹಾರಮುದಾರಂ।ಸಾಮನುತೇಕೃಶತನುರಿವಭಾರಂ। ರಾಧಿ

ಶವಕೃಷ್ಣ ರಾಧಿಕಾ. ರಾಧಿಕಾವಿರಹೇತವಕೇಶವ ರಾಧಿಕಾಕೃಷ್ಣ ರಾಧಿಕಾ॥

ಟೀ. ಹೇ ಕೇಶವ-ಎಲೈಸ್ವಾಮಿಯೇ, ಕೃಶತನುಃ-ಕೃಶಾಂಗಿಯಾದ, ಸಾ-ಆರಾಧೆಯು, ತವ-ನಿನ್ನ, ವಿರಹೇ-ವಿಯೋಗದಲ್ಲಿ, ಉದಾರಂ-ಉತ್ಕೃಷ್ಟವಾದ, ಸ್ತನವಿನಿಹಿತಂ, ಸ್ತನ-ಕುಚಗಳಮೇಲೆ, ವಿನಿಹಿತಂ-ಇರಿಸಲ್ಪಟ್ಟ, ಹಾರಮಪಿ-ಮಾಲೆಯನ್ನೂಕೂಡ, ಭಾರಮಿವ-ಭಾರವನ್ನೋಪಾದಿಯಲ್ಲಿ, ಮನುತೇ-ಎಣಿಸುತ್ತಾಳೆ.

ಶ್ವಸಿತಪವನಮನುಪಮಪರಿಣಾಹಂ। ಮದನದಹನಮಿವವಹತಿಸದಾಹಂ. ರಾಧಿಕಾ. ಟೀ. ಅನುಪಮಪರಿಣಾಹಂ, ಅನುಪಮ-ಅಸಮಾನವಾದ, ಪರಿಣಾಹಂ-ವಿಸ್ತಾರವುಳ್ಳ, ಶ್ವಸಿತಪವನಮಪಿ-ನಿಶ್ವಾಸಮಾರುತವನ್ನೂ ಕೂಡ, ಸದಾಹಂ-ತಾಪದೊಡಗೂಡಿರುವ, ಮದನದಹನಮಿವ, ಮದನ-ಮನ್ಮಥನೆಂಬ, ದಹನಮಿವ-ಅಗ್ನಿಯನ್ನೋಪಾದಿಯಲ್ಲಿ, ವಹತಿ-ವಹಿಸುತ್ತಾಳೆ.

ಸರಸಮಸೃಣಮಪಿಮಲಯಜಪಂಕಂ।ಪಶ್ಯತಿವಿಷಮಿವವಪುಷಿಸಶಂಕಂ. ರಾಧಿಕಾ. ಟೀ. ಸರಸಮಸೃಣಂ, ಸರಸ-ಆರ್ದ್ರವಾದ, ಮಸೃಣಂ, ನುಣುಪಾದ, ಮಲಯಜಪಂಕಮಪಿ, ಮಲಯಜ-ಶ್ರೀಗಂಧದ, ಪಂಕಮಪಿ-ಕೆಸರನ್ನೂ ಕೂಡ, ವಪುಷಿ-ಶರೀರದಲ್ಲಿ, ವಿಷಮಿವ-ವಿಷವನ್ನೋಪಾದಿಯಲ್ಲಿ, ಸಶಂಕಂ-ಭಯದೊಡನೆ ಕೂಡಿರೋಣದ್ಯಾಗೋಹಾಗೆ, ಪಶ್ಯತಿ-ನೋಡುತಲಿಧಾಳೆ.

ದಿಶಿದಿಶಿಕಿರತಿಸಜಲಕಣಜಾಲಂ।ನಯನನಳಿನಮಿವವಿಗಳಿತನಾಳಂ.ರಾಧಿಕಾ. ಟೀ. ಸಜಲಕಣಜಾಲಂ-ಉದಕಬಿಂದು ಸಮೂಹದೊಡಗೂಡಿದ, ವಿಗಳಿತನಾಳಮಿವಸ್ಥಿತಂ, ವಿಗಳಿತ-ಜಗಳಿರುವ, ನಾಳಮಿವಸ್ಥಿತಂ-ದಂಡವುಳ್ಳದ್ದೋಯಂಬಂತಿರುವ, ನಯನನಳಿನಂ, ನಯನ-ನೇತ್ರಗಳೆಂಬ, ನಳಿನಂ-ಕಮಲವನ್ನು, ದಿಶಿದಿಶಿ-ದಿಕ್ಕುದಿಕ್ಕುಗಳಲ್ಲಿ, ಕಿರತಿ-ಯರಚುತಲಿಧಾಳೆ.

ನಯನವಿಷಯಮಪಿಕಿಸಲಯತಲ್ಪಂ। ಕಲಯತಿವಿರಹಹುತಾಶನಕಲ್ಪಂ. ರಾಧಿಕಾ. ಟೀ. ನಯನವಿಷಯಂ, ನಯನ-ನೇತ್ರಗಳಿಗೆ, ವಿಷಯಂ-ಗೋಚರವಾದ, ಕಿಸಲಯತಲ್ಪಂ, ಕಿಸಲಯ-ತಳಿರ್ಗಳ, ತಲ್ಪಂ-ಹಾಸಿಗೆಯನ್ನು, ವಿರಹಹುತಾಶನಕಲ್ಪಮಿವ, ವಿರಹ-ವಿಯೋಗವೆಂಬ, ಹುತಾಶನ-ಅಗ್ನಿಗೆ, ಕಲ್ಪಮಿವ-ಸಮಾನವಾದದ್ದೋಪಾದಿಯಲ್ಲಿ, ಕಲಯತಿ-[illegible]ಸುತಲಿಧಾಳೆ.

ತ್ಯಜತಿನಪಾಣಿತಲೇನಕಪೋಲಂ। ಬಾಲಶಶಿನಮಿವಸಾಯಮಲೋಲಂರಾಧಿಕಾ

ಟೀ. ಸಾಯಂ - ಸಾಯಂಕಾಲದಲ್ಲಿ, ಅಲೋಲಂ - ಚಲಿಸದಯಿರುವ, ಬಾಲಶಶಿನಮಿವ - ಯಳಚಂದ್ರನಂತಿರುವ, ಕಪೋಲಂ - ಗಂಡಸ್ಥಲವನ್ನು, ಪಾಣಿತಲೇನ-ಅಂಗೈಯಿಂದ. ನತ್ಯಜತಿ-ಬಿಡುವದಿಲ್ಲ.

ಹರಿರಿತಿಹರಿರಿತಿಜಪತಿಸಕಾಮಂ। ವಿರಹವಿಹಿತಮರಣೇವನಿಕಾಮಂರಾಧಿಕಾ.

ಟೀ. ಸಾ-ಆರಾಧೆಯು, ಹರಿರಿತಿಹರಿರಿತಿ- ಹರಿಹರೀಯೆಂದು, ಸಕಾಮಂ- ಅಭಿಲಾಷೆ ಯೊಡಗೂಡಿರೋಣ ಹ್ಯಾಗೋಹಾಗೆ, ನಿಕಾಮಂ - ಅತ್ಯಂತವಾಗಿ, ವಿರಹವಿಹಿತಮರಣೇವ, ವಿರಹ -- ವಿಯೋಗದಿಂದ, ವಿಹಿತ -- ಮಾಡಲ್ಪಟ್ಟ, ಮರಣೇವ - ಮರಣವುಳ್ಳವಳೋ ಯೆಂಬಂತೆ, ಜಪತಿ - ಜಪಿಸುತಲಿಧಾಳೆ

ಶ್ರೀಜಯದೇವಭಣಿತಮಿತಿಗೀತಂ। ಸುಖಯತುಕೇಶವಪದಮುಪನೀತಂರಾಧಿಕಾಕೃಷ್ಣರಾಧಿಕಾರಾಧಿಕಾವಿರಹೇತವ ಕೇಶವ ರಾಧಿಕಾಕೃಷ್ಣ ರಾಧಿಕಾ॥

ಟೀ. ಶ್ರೀಜಯದೇವಭಣಿತಂ, ಶ್ರೀಜಯದೇವ- ಜಯದೇವನೆಂಬಕವಿಯಿಂದ, ಭಣಿತಂ- ಹೇಳಲ್ಪಟ್ಟ, ಕೇಶವಪದಂ, ಕೇಶವ-ಶ್ರೀಕೃಷ್ಣನ, ಪದಂ- ಪಾದಗಳನ್ನು, ಉಪನೀತಂ-ಹೊಂದಿಸಲ್ಪಟ್ಟ, ಇತಿ- ಈ, ಗೀತಂ-ಗೀತವು, ಸುಖಯತು - ಸುಖಪಡಿಸಲಿ.

ತಾ. ಎಲೈ ಕೃಷ್ಣನೆ ಲೋಕದಲ್ಲಿ ಪ್ರಸಿದ್ಧಂಗಳಾದ ಚಂದನ ಮಂದಮಾರುತ ಚಂದ್ರಕಿರಣ ಮೊದಲಾದ ಸಂಭೋಗಯೋಗ್ಯಂಗಳಾದ ಪದಾರ್ಥಂಗಳೆಲ್ಲವಂ ನಿನ್ನ ವಿರಹದಿಂ ತಪಿಸುತಲಿರುವ ಆ ರಾಧಾದೇವಿಗೆ ಶತ್ರುಗಳಾಗಿವೆ ಮತ್ತೇನು ವಿಶೇಷಮಂಪೇಳಲಿ.

ಶ್ಲೋ. ಸ್ಮರಾತುರಾಂದೈವತವೈದ್ಯಹೃದ್ಯತ್ವದಂಗಸಂಗಾಮೃತಮಾತ್ರಸಾಧ್ಯಾಂ । ನಿವೃತ್ತಬಾಧಾಂಕುರುಷೆನರಾಧಾಮುಪೇಂದ್ರವಜ್ರಾದಪಿದಾರುಣೋಸಿ॥ ಟೀ. ದೈವತವೈದ್ಯಹೃದ್ಯ, ದೈವತ - ದೇವತೆಗಳಿಗೆ, ವೈದ್ಯ - ವೈದ್ಯರಾದ ಅಶ್ವಿನೀದೇವತೆಗಳಂತೆ, ಹೃದ್ಯ - ಮನೋಹರನಾದ, ಹೇಉಪೇಂದ್ರ - ಎಲೈ ಕೃಷ್ಣಸ್ವಾಮಿಯೇ, ಸ್ಮರಾತುರಾಂ, ಸ್ಮರ - ಮನ್ಮಥನಿಂದ, ಆತುರಾಂ -- ಪೀಡಿತಳಾದ, ತ್ವದಂಗಸಂಗಾಮೃತಮಾತ್ರಸಾಧ್ಯಾಂ, ತ್ವತ್ -ನಿನ್ನ, ಅಂಗ - ಶರೀರದ, ಸಂಗ - ಸಂಬಂಧವೆಂಬ, ಅಮೃತಮಾತ್ರ -ಅಮೃತಮಾತ್ರದಿಂದಲೆ, ಸಾಧ್ಯಾಂ -ಸಾಧಿಸಲು ಯೋಗ್ಯಳಾದ, ರಾಧಾಂ - ರಾಧೆಯನ್ನು, ನಿವೃತ್ತಬಾಧಾಂ, ನಿವೃತ್ತ - ಹಿಂತಿರಿಗಿಸಲ್ಪಟ್ಟ, ಬಾಧಾಂ - ವ್ಯಥೆಯುಳ್ಳವಳನ್ನಾಗಿ, ನಕುರುಷೆಯದಿ- ಮಾಡದೆ

ದ್ಧಿಯೇಅದರೆ, ವಜ್ರಾದಪಿ - ವಜ್ರಾಯುಧಕ್ಕಿಂತಲು, ದಾರುಣಃ - ಕ್ರೂರನಾಗಿ, ಅಸಿ-ಆಗುತ್ತೀಯೆ. ತಾ. ಎಲೈ ಕೃಷ್ಣನೆ ವಿರಹತಾಪಶಾಂತ್ಯರ್ಥವಾಗಿ ನಿನ್ನ ಗಾಢಾಲಿಂಗನವನ್ನೆ ಬಯಸುತಲಿರುವ ಅ ರಾಧೆಯಂ ಇಂತಿರ್ದಸಮಯದೋಳ್ ಸಂತೋಷಪಡಿಸದೆ ಇದ್ದಲ್ಲಿ ನೀನು ಅತಿಕಠಿನಮನಸ್ಸುಳ್ಳವನೆಂದು ತಿಳಿಯುತ್ತೇನೆ.

ಶ್ಲೋ. ಕಂದರ್ಪಜ್ವರಸಂಜ್ವರಾಕುಲತನೋರಾಶ್ಚರ್ಯಮಸ್ಯಾಶ್ಚಿರಂಚೇತಶ್ಚಂದನಚಂದ್ರಮಃ ಕಮಲಿನೀಚಿಂತಾಸುಸಂತಾಮ್ಯತಿ॥ ಕಿಂತುಕ್ಲಾಂತಿವಶೇನ ಶೀತಲತರಂತ್ವಾಮೇಕಮೇವಪ್ರಿಯಂಧ್ಯಾಯಂತೀರಹಸಿಸ್ಥಿತಂಕಥಮಪಿಕ್ಷೀಣಾಕ್ಷಣಂಪ್ರಾಣಿತಿ॥ ಟೀ ಕಂದರ್ಪಜ್ವರಸಂಜ್ವರಾಕುಲತನೋಃ, ಕಂದರ್ಪಜ್ವರ- ಮನ್ಮಥಜ್ವರದಿಂದುಂಟಾದ, ಸಂಜ್ವರ- ತಾಪದಿಂ, ಆಕುಲ- ವ್ಯಾಕುಲವಾದ, ತನೋಃ - ಶರೀರವುಳ್ಳ, ಅಸ್ಯಾಃ-ಈರಾಧೆಯ, ಚೇತಃ- ಮನಸ್ಸು, ಚಂದನಚಂದ್ರಮಃಕಮಲಿನೀಚಿಂತಾಸು, ಚಂದನ - ಗಂಧವೇನು, ಚಂದ್ರಮಃ-ಚಂದ್ರನೇನು, ಕಮಲಿನೀ-ತಾವರೆಬಳ್ಳಿಯೇನು, ಇವುಗಳ- ಚಿಂತಾಸು-ಸ್ಮರಣೆಯಲ್ಲಿ, ಚಿರಂ-ಬಹುಕಾಲಪರ್ಯಂತರಕ್ಕು, ಸಂತಾಮ್ಯತಿ-ಸಂತಾಪಪಡುತಲಿಧೆ, ಆಶ್ಚರ್ಯ-ಆಶ್ಚರ್ಯವೂ, ಕಿಂತು- ಮತ್ತೇನಂದರೊ, ಕ್ಲಾಂತಿವಶೇನ, ಕ್ಲಾಂತಿ - ಬಳಲಿಕೆಯ, ವಶೇನ - ಅಧೀನದಿಂದ, ಕ್ಷೀಣಾ ಕೃಶಳಾದ ಅರಾಧೆಯು, ರಹಸಿ- ಏಕಾಂತಸ್ಥಳದಲ್ಲಿ, ಸ್ಥಿತಂ - ಇರುತಲಿರುವ, ಪ್ರಿಯಂ - ಪ್ರೀತಿಪಾತ್ರನಾದ, ತ್ವಾಮೇಕಮೇವ - ನಿನ್ನೊಬ್ಬನನ್ನೆ, ಶೀತಲತರಂ - ಅತ್ಯಂತಶೀತಲನನ್ನಾಗಿ, ಧ್ಯಾಯಂತೀ - ನೆನಸುತಲಿರುವಳಾಗಿ, ಕಥಮಪಿ-ಅತಿಪ್ರಯಾಸದಿಂದ, ಕ್ಷಣಂ - ಕ್ಷಣಕಾಲಮಾತ್ರವೆ, ಪ್ರಾಣಿತಿ-ಜೀವಿಸುತ್ತಾಳೆ. ತಾ. ಚಂದನವೊದಲಾದಶೀತಲದ್ರವ್ಯಂಗಳು ವಿಶೇಷ ಸಂತಾಪವನ್ನುಂಟು ಮಾಡುತಲಿರಲಾಗಿ ಅರಾಧೆಯು ನಿನ್ನಸ್ಮರಣಾಮೃತಮಾತ್ರದಿಂದಲೇ ಜೀವಿಸುತಲಿಧಾಳೆ.

ಶ್ಲೋ. ಕ್ಷಣಮಪಿವಿರಹಃಪುರಾನಸೇಹೆನಯನನಿಮೀಲಿತಖಿನ್ನಯಾತಯಾತೇ|ಶ್ವಸಿತಿಕಥಮಸೌರಸಾಲಶಾಖಾಂಚಿರವಿರಹೇಣವಿಲೋಕ್ಯಪುಷ್ಪಿತಾಗ್ರಾಂ.

ಟೀ. ಪುರಾ - ಪೂರ್ವದಲ್ಲಿ, ನಯನನಿಮೀಲಿತ ಖಿನ್ನಯಾ, ನಯನ - ನೇತ್ರಗಳ, ನಿಮೀಲಿತ - ಮುಚ್ಚೋಣದರಿಂದ, ಖಿನ್ನಯಾ - ಆಯಾಸಪಡಿಸಲ್ಪಟ್ಟ, ತಯಾ - ಆರಾಧೆಯಿಂದ, ತೆ - ನಿನ್ನ, ವಿರಹಃ- ವಿಯೋಗವು, ಕ್ಷಣಮಪಿ-ಕ್ಷಣಕಾಲವು, ನಸೇಹೆ - ಸಹಿಸಲ್ಪಡಲಿಲ್ಲವೊ, ಅಸೌ-ಈರಾಧೆಯು, ಪುಷ್ಪಿತಾಗ್ರಾಂ, ಪುಷ್ಪಿತ - ಪುಷ್ಪಿಸಿರುವ, ಅಗ್ರಾಂ - ತುದಿಯುಳ್ಳ,

ರಸಾಲಶಾಖಾಂ, ರಸಾಲ - ಮಾವಿನಮರದ, ಶಾಖಾಂ - ಕೊಂಬೆಯನ್ನು, ವಿಲೋಕ್ಯ - ನೋಡಿ, ಚಿರವಿರಹೇಣ, ಚಿರ-ಬಹುಕಾಲವಾಗಿ, ವಿರಹೇಣ-ವಿಯೋಗದಿಂದ, ಕಥಃ-ಹ್ಯಾಗತಾನೆ, ಶ್ವಸಿತಿ-ಬದುಕುತ್ತಾಳೆ.

ತಾ. ಎಲೈಕೃಷ್ಣನೆ ! ವಿಷಮಾತ್ರವೂ ನಿನ್ನ ವಿರಹವಂ ಸಹಿಸಲಾರದ ರಾಧೆಯು ಇಂತಪ್ಪ ವಸಂತಸಮಯನೋಡಿ ಬಹುಕಾಲವಾಗಿ ನಿನ್ನ ವಿಯೋಗದಿಂ ಹ್ಯಾಗೆ ಜೀವಿಸುವಳು.

ಇತಿಕೃಷ್ಣದಾಸಜಯದೇವ ಕೃತೌ ಗೀತಗೋವಿಂದೆ ಮಹಾಕಾವ್ಯೇಚತುರ್ಥಸ್ಸರ್ಗವು ಸಂಪೂರ್ಣವಾದುದು.

ಶ್ಲೋ. ಅಹಮಿಹನಿವಸಾಮಿಯಾಹಿರಾಧಾಮನುನಯಮದ್ವಚನೇನಚಾನಯೇಥಾಃ। ಇತಿಮಧುರಿಪುಣಾಸಖೀನಿಯುಕ್ತಾಸ್ವಯಮಿದಮೇತ್ಯಪುನರ್ಜಗಾದರಾಧಾ॥ ಟೀ. ಅಹಂ-ನಾನು, ಇಹ - ಈಲತಾಗೃಹದಲ್ಲಿ, ನಿವಸಾಮಿ-ವಾಸಮಾಡುತಲಿರ್ಥೇನೆ, ಯಾಹಿ- ಪೋಗು, ರಾಧಾಂ - ರಾಧೆಯನ್ನು, ಮದ್ವಚನೇನ, ಮತ್-ನನ್ನ, ವಚನೇನ-ಮಾತಿನಿಂದ, ಅನುನಯ - ಸಮಾಧಾನಗೊಳಿಸು, ಆನಯೇಥಾಃ-ಕರದುಕೊಂಡುಬಾ, ಇತಿ-ಹೀಗೆಂದು, ಮಧುರಿಪುಣಾ-ಶ್ರೀಕೃಷ್ಣನಿಂದ, ನಿಯುಕ್ತಾ-ಆಜ್ಞಾಪಿಸಲ್ಪಟ್ಟ, ಸಖೀ-ಕೆಳದಿಯು, ಸ್ವಯಂ-ತಾನೇ, ಪುನಃ-ಮತ್ತು, ಏತ್ಯ-ಪೋಗಿ, ಇದಂ- ಈ ವಾಕ್ಯನ್ನು, ರಾಧಾಂ - ರಾಧೆಯಂಕುರಿತು, ಜಗಾದ - ನುಡಿದಳು.

ತಾ. ರಾಧೆಯಂ ನನ್ನ ಮಾತಿನಿಂ ಸಮಾಧಾನಪಡಿಸಿ ಇಲ್ಲಿಗೆ ಕರದುಕೊಂಡುಬಾಯೆಂದು ಶ್ರೀಕೃಷ್ಣನಿಂ ಪೇಳಲ್ಪಟ್ಟ ಕೆಳದಿಯು ಮತ್ತಂ ಪೋಗಿ ರಾಧೆಯಂ ಕುರಿತೊಂದು ನುಡಿಯಂ ನುಡಿದಳು.

(ದಶಮಾಷ್ಟಪದೀ ಪ್ರಾರಂಭಃ ರಾಗ-ಪಂತುವರಾಳಿ)

ವಹತಿಮಲಯಸಮೀರೆಮದನಮುಪನಿಧಾಯ। ಸ್ಫುಟತಿಕುಸುಮನಿಕರೆವಿರಹಿಹೃದಯದಳನಾಯ। ತವವಿರಹೆವನಮಾಲೀಸಖಿಸೀದತಿರಾಧೆತವವಿರಹೆವನಮಾಲೀ॥ ಟೀ. ಸಖಿ-ಕೆಳದಿಯಾದ, ಹೇರಾಧೆ-ಎಲೈರಾಧೆಯೆ, ಮಲಯಸಮೀರೆ, ಮಲಯ-ಮಲಯಪರ್ವತದ, ಸಮೀರೆ-ತಂಘಾಳಿಯು, ಮದನಂ-ಮನ್ಮಥನನ್ನು, ಉಪನಿಧಾಯ - ಸಹಾಯ ಮಾಡಿಕೊಂಡು, ವಹತಿಸತಿ-ಬೀಸುತ್ತಿರಲಾಗಿ, ಕುಸುಮನಿಕರೆ, ಕುಸುಮ - ಪುಷ್ಪಗಳ, ನಿಕರೆ - ಸಮೂಹವು, ವಿರಹಿಹೃದಯದಳನಾಯ, ವಿರಹಿ - ಇಷ್ಟಜನಗಳನ್ನಗಲಿದವರ, ಹೃದಯ - ಮನಸ್ಸಿನ, ದಳನಾಯ - ಶೀಳೋಣಕೋಸ್ಕರ, ಸ್ಫುಟತಿಸತಿ-ಅರಳುತಲಿರಲಾಗಿ, ವನಮಾಲೀ- ಶ್ರೀಕೃಷ್ಣನು, ತವ - ನಿನ, ವಿರ

ಹೆ-ವಿಯೋಗದಲ್ಲಿ, ಸೀದತಿ-ವ್ಯಸನಪಡುತಲಿಧಾನೆ.

ದಹತಿಶಿಶಿರಮಯೂಖೆಮರಣಮನುಕರೋತಿಪತತಿಮದನವಿಶಿಖೆವಿಲಪತಿವಿಕಲೀಕರೋತಿತವವಿರಹೆ॥ ಟೀ. ಹೇಸಖಿ-ಎಲ್ಳೈರಾಧೆಯೆ ಶಿಶಿರಮಯೂಖೆ-ಶೀತಳ ಪಾದಕಿರಣಗಳುಳ್ಳ ಚಂದ್ರನು, ದಹತಿಸತಿ- ಸುಡುತ ಲಿ ರ ಲಾಗಿ ಮರಣಂ- ಮರಣವನ್ನು, ಅನುಕರೋತಿ - ಅನುಸರಿಸುತಲಿಧಾನೆ, ಮದನವಿಶಿಖೆ, ಮದನ-ಮನ್ಮಥನ, ವಿಶಿಖೆ-ಬಾಣವು, ಪತತಿಸತಿ-ಬೀಳುತಲಿರಲಾಗಿ, ವಿಲಪತಿ-ಅಳುತಲಿಧಾನೆ, ವಿಕಲೀಕರೋತಿ-ಶೂನ್ಯೇಂದ್ರಿಯನಾಗುತ್ತಾನೆ. ... ... ... ... ೨॥

ಧ್ವನತಿಮಧುಪಸಮೂಹೆಶ್ರವಣಮಪಿದಧಾತಿ ಮನಸಿವಲಿತವಿರಹೆನಿಶಿನಿಶಿರುಜಮುಪಯಾತಿ ತವವಿರಹೆ॥ ಟೀ. ಹೇಸಖಿ-ಎಲ್ಳೈಸಖಿಯೆ ಮಧುಪಸಮೂಹೆ, ಮಧುಪ-ತುಂಬಿಗಳ, ಸಮೂಹೆ-ಗುಂಪು, ಧ್ವನತಿಸತ್ಯಪಿ-ಝುಂಕಾರಮಾಡುತಲಿರಲಾಗಿಯೂ ಕೂಡ, ಶ್ರವಣಂ-ಕಿವಿಯನ್ನು, ಪಿದಧಾತಿ - ಮುಚ್ಚುತಲಿಧಾನೆ, ನಿಶಿನಿಶಿ - ಪ್ರತಿರಾತ್ರಿಯಲ್ಲೂ, ಮನಸಿ- ಮನಸ್ಸು, ವಲಿತವಿರಹೆಸತಿ, ವಲಿತ-ಆಕ್ರಮಿಸಲ್ಪಟ್ಟ, ವಿರಹೆಸತಿ-ವಿಯೋಗವುಳ್ಳದ್ದಾಗುತಿರಲಾಗಿ, ರುಜಂ-ಮನೋವ್ಯಾಧಿಯನ್ನು, ಉಪಯಾತಿ-ಹೊಂದುತಲಿಧಾನೆ. ... ... ... ... ೩॥

ವಸತಿವಿಪಿನವಿತಾನೆತ್ಯಜತಿಲಲಿತಧಾಮ ಲುಠತಿಧರಣಿಶಯನೆಬಹುವಿಲಪತಿತವನಾಮ ತವವಿರಹೆ॥ ಟೀ. ಹೇಸಖಿ-ಎಲ್ಳೈರಾಧೆಯೆ, ವಿಪಿನವಿತಾನೆ, ವಿಪಿನ-ವನಗಳ, ವಿತಾನೆ-ಸಮೂಹದಲ್ಲಿ, ವಸತಿ-ವಾಸ ಮಾಡುತಲಿಧಾನೆ, ಲಲಿತಧಾಮ, ಲಲಿತ-ಮನೋಹರವಾದ, ಧಾಮ-ಮನೆಯನ್ನು, ತ್ಯಜತಿ-ಬಿಡುತಲಿಧಾನೆ, ಧರಣಿಶಯನೆ, ಧರಣಿ-ಭೂಮಿಯೆಂಬ, ಶಯನೆ-ಹಾಸಿಗೆಯಲ್ಲಿ, ಲುಠತಿ-ಹೊರಲಾಡುತಲಿಧಾನೆ, ತವ-ನಿನ್ನ, ನಾಮ-ಹೆಸರನ್ನು, ಬಹು-ಅಧಿಕವಾಗಿ, ವಿಲಪತಿ-ಪ್ರಲಾಪಿಸುತ್ತಾನೆ. ... ೪॥

ರಣತಿಪಿಕಸಮವಾಯೆಪ್ರತಿದಿಶಮನುಯಾತಿ ಹಸತಿಮನುಜನಿಚಯೆವಿರಹಮಪಲಪತಿನೇತಿ ತವವಿರಹೆ॥ ಟೀ. ಹೇಸಖಿ-ಎಲ್ಳೈಕೆಳದಿಯೆ, ಪಿಕಸಮವಾಯೆ, ಪಿಕ-ಕೋಗಿಲೆಗಳ, ಸಮವಾಯೆ-ಸಮೂಹವು, ರಣತಿಸತಿ-ಧ್ವನಿಗೈಯುತಿರಲಾಗಿ, ಪ್ರತಿದಿಶಂ-ದಿಕ್ಕುದಿಕ್ಕುಗಳನ್ನು, ಅನುಯಾತಿ- ಅನುಸರಿಸಿ ಹೋಗುತಲಿಧಾನೆ, ಮನುಜನಿಚಯೆ, ಮನುಜ - ಮನುಷ್ಯರುಗಳ, ನಿಚಯೆ-ಗುಂಪು, ಹಸತಿಸತಿ-ನಗುತಿರಲಾಗಿ, ವಿರಹಂ-ವಿರಹ ವ್ಯಥೆಯನ್ನು, ನೇತಿ- ಇಲ್ಲವೆಂದು, ಅಪಲಪತಿ- ಅಪಲಾಪಮಾಡುತ್ತಾನೆ.

ಸ್ಫುರತಿಕಲರವರಾವೇಸ್ಮರತಿಭಣಿತಮಪಿ। ತವರತಿಸುಖವಿಭವೇಗಣಯತಿ ಸುಗುಣಮತೀವತವವಿರಹೇ॥ ಟೀ. ಹೇಸಖಿ-ಎಲೈಸ್ನೇಹಿತಳೆ ಕಲರವ ರಾವೆ, ಕಲರವ-ಕಪೋತಪಕ್ಷಿಗಳ, ರಾವೆ-ಧ್ವನಿಯು, ಸ್ಫುರತಿಸತಿ-ಉಂ ಟಾಗುತ್ತಿರಲಾಗಿ, ಭಣಿತಮಪಿ- ರತಿಕೂಜಿತವನ್ನೆ, ಸ್ಮರತಿ- ಸ್ಮರಿಸು ತಲಿಧಾನೆ, ತವ-ನಿನ್ನ ರತಿಸುಖವಿಭವೆ, ರತಿಸುಖ-ಕ್ರೀಡಾಸೌಖ್ಯದ ವಿ ಭವೆ-ಆಧಿಕ್ಯದಲ್ಲಿ, ಅತೀವ-ಅತ್ಯಂತವಾಗಿ, ಸುಗುಣಂ-ಸದ್ಗುಣವನ್ನೆ,ಗಣ ಯತಿ-ಎಣಿಸುತಲಿಧಾನೆ. ... ... ... ೬॥

ತ್ವದಭಿದಶುಭದಮಾಸಂವದತಿನರಿಶೃಣೋತಿತಮಪಿಜಪತಿಸರಸಂಯುವತಿ ಷುನಗತಿಮುಪೈತಿ ತವವಿರಹೆ॥ ಟೀ. ಹೇಸಖಿ-ಎಲೈಕೆಳದಿಯಾದ ರಾ ಧೆಯೆ, ನರಿ-ಮನುಷ್ಯನು, ತ್ವದಭಿದಶುಭದಮಾಸಂ, ತ್ವತ್-ನಿನ್ನ, ಅಭಿ ದ-ಹೆಸರಂತೆಹೆಸರುಳ್ಳ, ಶುಭದ- ಮಂಗಳಕರವಾದ, ಮಾಸಂ-ವೈಶಾಖ ಮಾಸವನ್ನು, ವದತಿಸತಿ-ಹೇಳುತಿರಲಾಗಿ, ಶೃಣೋತಿ-ಕೇಳುತ್ತಾನೆ, ತ ಮಪಿ - ಆರಾಧಾಖ್ಯ ಮಾಸವನ್ನು ಕೂಡ, ಸರಸಂಯಥಾತಥಾ-ಅನು ರಾಗದೊಡನೆ ಕೂಡಿಕೊಂಡಿರೋಣ ಹ್ಯಾಗೊ ಹಾಗೆ ಜಪತಿ-ಭಾರಿ ಭಾರಿಗೂ ಹೇಳುತ್ತಾನೆ, ಯುವತಿಷು-ಗೋಪತರುಣೀರುಗಳಲ್ಲಿ, ರತಿಂ- ಆಸಕ್ತಿಯನ್ನು, ನೋಪೈತಿ-ಹೊಂದುವದಿಲ್ಲ. ... ... ೭॥

ಫಣಿತಿಕವಿಜಯದೇವವಿರಹವಿಲಸಿತೇನ ಮನಸಿರಭಸವಿಭವೇಹರಿರುದಯತು ಸುಕೃತೇನ ತವವಿರಹೆವನಮಾಲೀ ಸಖಿಸೀದತಿರಾಧೆ ತವವಿರಹೆವನಮಾಲೀ

ಟೀ. ಕವಿಜಯದೇವೇ-ಜಯದೇವನೆಂಬ ಕವಿಯು, ವಿರಹವಿಲಸಿತೇ ನ, ವಿರಹ- ಶ್ರೀಕೃಷ್ಣನವಿರಹದ, ವಿಲಸಿತೇನ-ಲೀಲೆಯೊಡನೆಕೂಡ, ಫ ಣಿತಿಸತಿ-ಹೇಳುತಿರಲಾಗಿ, ಹರಿಃ-ಶ್ರೀಕೃಷ್ಣನು, ಸುಕೃತೇನ-ಪುಣ್ಯದಿಂ ದ, ರಭಸವಿಭವೆ, ರಭಸ-ಸಂತೋಷದ, ವಿಭವೆ- ಆಧಿಕ್ಯವುಳ್ಳ, ಮನಸಿ- ಮನಸ್ಸಿನಲ್ಲಿ, ಉದಯತು-ಆವಿರ್ಭವಿಸಲಿ. ತಾ. ಎಲೈರಾಧೆಯೆ ನಿನ್ನಂ ಅಗಲಿರುವ ಶ್ರೀಕೃಷ್ಣನು ಶುಕಪಿಕಾದಿ ಮಧುರ ಧ್ವನಿಗಳಿಂದಲೂ ವಿಕಸಿ ಸಿರುವ ಪುಷ್ಪಗಳ ದರ್ಶನದಿಂದಲೂ ಚಂದ್ರ ಕಿರಣ ಮಂದಮಾರುತ ಮೊದಲಾದವುಗಳ ಸೇವನೆಯಿಂದಲೂ ಅಧಿಕವಾದ ವಿರಹವ್ಯಥೆಯುಳ್ಳವನಾಗಿ ನಿನ್ನ ರತಿಸುಖವನ್ನೆ ಬಯಸುತಲಿಧಾನೆ.

ಶ್ಲೊ. ಪೂರ್ವಂಯತ್ರಸಮಂತ್ವಯಾರತಿಪತೇರಾಸಾಧಿತಾಸ್ಸಿದ್ಧಯಸ್ತಸ್ಮಿ ನ್ನೆವನಿಕುಂಜಮನ್ಮಥಮಹಾತೀರ್ಥೆಪುನರ್ಮಾಧವಃ॥ ಧ್ಯಾಯಂಸ್ತ್ವಾಮ ನಿಶಂಜಪನ್ನಪಿತವೈವಾಲಾಪಮಂತ್ರಾವಳಿಂಭೂಯಸ್ತ್ವತ್ಕುಚಕುಂಭನಿರ್ಭ

ರಪರೀರಂಭಾಮೃತಂವಾಂಛತಿ ಟೀ. ಪೂರ್ವಂ-ಪೂರ್ವದಲ್ಲಿ, ಮಾಧವಃ-ಶ್ರೀಕೃಷ್ಣನು, ಯತ್ರ - ಯಾವನಿಕುಂಜದಲ್ಲಿ, ತ್ವಯಾಸಮಂ-ನಿನ್ನೊಡಗೂಡಿ, ರತಿಪತೇಃ-ಮನ್ಮಥನ, ಸಿದ್ಧಯಃ-ಕಾರ್ಯಸಿದ್ಧಿಗಳು, ಆಸಾದಿತಾಃ-ಹೊಂದಲ್ಪಟ್ಟವೊ, ತಸ್ಮಿನ್ನೇವ-ಅದೆ, ನಿಕುಂಜ- ಮನ್ಮಥಮಹಾತೀರ್ಥೇಪುನಃ, ನಿಕುಂಜ-ಲತಾಗೃಹವೆಂಬ, ಮನ್ಮಥಮಹಾತೀರ್ಥೇಪುನಃ- ಮನ್ಮಥನ ಪುಣ್ಯಕ್ಷೇತ್ರದಲ್ಲಿಯಾದರೂ, ತ್ವಾಂ-ನಿನ್ನನ್ನು, ಧ್ಯಾಯನ್ - ಸ್ಮರಿಸುತಲಿರುವನಾಗಿಯು, ತವ-ನಿನ್ನ, ಆಲಾಪಮಂತ್ರಾವಳಿಮೇವ, ಆಲಾಪ-ಸಂಭಾಷಣೆ ಯೆಂಬ, ಮಂತ್ರ- ಮಂತ್ರಗಳ, ಆವಳಿಮೇವ- ಪರಂಪರೆಯನ್ನೆ, ಅನಿಶಂ-ನಿರಂತರದಲ್ಲೂ, ಜಪನ್ನಪಿ-ಜಪಿಸುತಲಿರುವನಾದಾಗ್ಯೂ, ಭೂಯಃ - ಮತ್ತು, ತ್ವತ್ಕುಚಕುಂಭ ನಿರ್ಭರಪರೀರಂಭಾಮೃತಂ, ತ್ವತ್-ನಿನ್ನ, ಕುಚಕುಂಭ - ಕುಂಭದಂತಿರುವ ಕುಚಗಳ ನಿರ್ಭರ-ಸಾಂದ್ರವಾದ, ಪರೀರಂಭ-ಆಲಿಂಗನವೆಂಬ, ಅಮೃತಂ-ಅಮೃತವನ್ನೆ ಮೋಕ್ಷವನ್ನೂ, ವಾಂಛತಿ-ಅಪೇಕ್ಷಿಸುತಲಿಧಾನೆ. ತಾ. ಶ್ರೀಕೃಷ್ಣನು ಪೂರ್ವದಲ್ಲಿ ನಿನ್ನೊಡಗೂಡಿ ರತಿಸುಖವಂ ಪೊಂದಿದ ಲತಾಗೃಹದಲ್ಲೇ ಕುಳಿತು ನಿನ್ನನ್ನು ಧ್ಯಾನಿಸುತ ನಿನ್ನ ನಾಮವನ್ನೆ ಜಪಿಸುತಲಿದ್ದಾಗ್ಯೂ ನಿನ್ನ ಗಾಢಾಲಿಂಗನವನ್ನೆ ಅಪೇಕ್ಷಿಸುತ ಲಿಧಾನೆ.

ಏಕಾದಶಾಷ್ಟಪದೀ ಪ್ರಾರಂಭಃ (ರಾಗ ಘೂರ್ಜರೀ.)

ರತಿಸುಖಸಾರೆಗತಮಭಿಸಾರೆಮದನಮನೋಹರವೇಷಂ| ನಕುರುನಿತಂಬಿನಿಗಮನವಿಳಂಬನಮನುಸರತಂಹೃದಯೇಶಂ॥ ಧೀರಸಮೀರೆಯಮುನಾತೀರೆವಸತಿವನೇವನಮಾಲೀ| ಗೋಪೀಪೀನಪಯೋಧರಮರ್ದನ ಚಂಚಲಕರಯುಗಶಾಲೀಧೀರಸಮೀರೆ ಯಮುನಾತೀರೆವಸತಿವನೇವನಮಾಲೀ. ಟೀ. ಹೇನಿತಂಬನಿ-ಎಲೈರಾಧೆಯೆ, ರತಿಸುಖಸಾರೆ, ರತಿ-ಸುರತದ, ಸುಖ-ಸೌಖ್ಯದಿಂದ, ಸಾರೆ-ಶ್ರೇಷ್ಠವಾದ, ಅಭಿಸಾರೆ-ಸಂಕೇತಸ್ಥಾನದಲ್ಲಿ, ಗತಂ-ಇರುತಲಿರುವ ಮದನಮನೋಹರವೇಷಂ, ಮದನ-ಮನ್ಮಥನಂತೆ, ಮನೋಹರ-ಮನೋಹರವಾದ, ವೇಷಂ-ಅಲಂಕಾರವುಳ್ಳ, ಹೃದಯೇಶಂ-ಪ್ರಾಣಕಾಂತನಾದ ತಂ-ಆ ಕೃಷ್ಣನನ್ನು, ಅನುಸರ-ಅನುಸರಿಸು, ಗಮನವಿಳಂಬನಂ, ಗಮನ-ಹೋಗೋಣದರಲ್ಲಿ, ವಿಳಂಬನಂ-ಸಾವಕಾಶವನ್ನು, ನಕುರು-ಮಾಡಬೇಡ ಗೋಪೀಪೀನ ಪಯೋಧರ ಮರ್ದನಚಂಚಲ ಕರಯುಗಶಾಲೀ, ಗೋಪೀ-ಗೋಪಸ್ತ್ರೀರುಗಳ, ಪೀನ-ದಪ್ಪವಾದ, ಪಯೋಧರ-ಸ್ತನಗಳ ಮರ್ದನ-ಪೀಡಿಸೋಣದರಲ್ಲಿ, ಚಂಚಲ-ಚಪಲವಾದ, ಕರ-ಹಸ್ತಗಳ, ಯು

ಗ-ಎರಡರಿಂ, ಕಾಲೀ-ಪ್ರಕಾಶಿಸುತ್ತಲಿರುವ, ವನಮಾಲೀ-ಶ್ರೀಕೃಷ್ಣನು ಯಮುನಾತೀರೆ, ಯಮುನಾ- ಕಾಳಿಂದೀ ನದಿಯ, ತೀರೆ- ದಡದಲ್ಲಿ ಧೀರಸಮೀರೆ, ಧೀರ-ಗಂಭೀರವಾದ, ಸಮೀರೆ-ಮಂದಮಾರುತವುಳ್ಳ, ವನೆ-ಬೃಂದಾವನದಲ್ಲಿ, ವಸತಿ-ವಾಸಮಾಡುತ್ತಲಿಧಾನೆ. ... ... ೧॥

ನಾಮಸಮೇತಂಕೃತಸಂಕೇತಂವಾದಯತೆಮೃದುವೇಣುಂ। ಬಹುಮನುತೇನನುತೆತನುಸಂಗತಪವನಚಲಿತಮಪಿರೇಣುಂ ಧೀರಸಮೀರೆ॥ ಟೀ. ವನಮಾಲೀ-ಶ್ರೀಕೃಷ್ಣನು,ನಾಮಸಮೇತಂ, ನಾಮ-ನಿನ್ನ ಹೆಸರಿನೊಡನೆ, ಸಮೇತಂ-ಕೂಡಿರೋಣ ಹ್ಯಾಗೋಹಾಗೆ, ಕೃತಸಂಕೇತಂ, ಕೃತ- ಮಾಡಲ್ಪಟ್ಟ,ಸಂಕೇತಂ-ಸಂಜ್ಞೆಯುಳ್ಳೋಣ ಹ್ಯಾಗೋಹಾಗೆ,ವೇಣುಂ-ಕೊಳಲನ್ನು, ಮೃದು - ಕೋಮಲವಾಗಿ, ವಾದಯತೆ - ಧ್ವನಿಗೈಸುತಲಿಧಾನೆ, -ತೆ- ನಿನ್ನ, ತನುಸಂಗತಪವನಚಲಿತಂ, ತನು-ಶರೀರದೊಡನೆ, ಸಂಗತ-ಸಂಬಂಧಿಸಿದ, ಪವನ-ಘಾಳಿಯಿಂದ, ಚಲಿತಂ-ತೆರಳಿದ, ರೇಣುಮಪಿ - ಧೂಳನ್ನುಕೂಡ, ಬಹುಮನುತೇನನು - ಅಧಿಕವಾಗಿ ಆದರಿಸುತಲಿಧಾನ ಯಲ್ಲವೆ. ... ... ... ... ೨॥

ಪತತಿಪತತ್ರೆವಿಚಲತಿಪತ್ರೆಶಂಕಿತಭವದುಪಯಾನಂ। ರಚಯತಿಶಯನಂ ಸಚಕಿತನಯನಂಪಶ್ಯತಿತವಪಂಥಾನಂ ಧೀರಸಮೀರೆ॥ ಟೀ. ಪತತ್ರೆ-ಪಕ್ಷಿಯು,ಪತತಿಸತಿ-ಹಾರುತಿರಲಾಗಿ,ಪತ್ರೆ-ಎಲೆಯು,ವಿಚಲತಿಸತಿ- ಅಳ್ಳಾಡುತಿರಲಾಗಿ, ಶಂಕಿತಭವದುಪಯಾನಂ, ಶಂಕಿತ-ಊಹಿಸಲ್ಪಟ್ಟ, ಭವತ್-ನಿನ್ನ, ಉಪಯಾನಂ-ಆಗಮನ ಉಳ್ಳೋಣ ಹ್ಯಾಗೋ ಹಾಗೆ, ಶಯನಂ-ಹಾಸಿಗೆಯನ್ನು, ರಚಯತಿ-ಮಾಡುತಲಿಧಾನೆ, ಸಚಕಿತನಯನಂ, ಸಚಕಿತ-ಭಯದೊಡನೆ ಕೂಡಿರುವ, ನಯನಂ- ನೇತ್ರಗಳುಳ್ಳೋಣಹ್ಯಾಗೋಹಾಗೆ, ತವ-ನಿನ್ನ,ಪಂಥಾನಂ-ಮಾರ್ಗವನ್ನು, ಪಶ್ಯತಿ-ನೋಡುತಲಿಧಾನೆ.

ಮುಖರಮಧೀರಂತ್ಯಜಮಂಜೀರಂರಿಪುಮಿವಕೇಳಿಷುಲೋಲಂ ಚಲಸಖಿಕುಂಜಂಸತಿಮಿರಪುಂಜಂಶೀಲಯನೀಲನಿಚೋಳಂಧೀರಸಮೀರೆ॥ಟೀ ಹೇಸಖಿ-ಎಲೈರಾಧೆಯೆ, ಮುಖರಂ-ಶಬ್ದಾಯಮಾನವಾದ, ಕೇಳಿಷು-ಕ್ರೀಡಗಳಲ್ಲಿ, ಲೋಲಂ-ಚಂಚಲವಾದ, ಮಂಜೀರಂ-ಪಾದಕಟಕವನ್ನು, ರಿಪುಮಿವ-ಶತ್ರುವನ್ನೋಪಾದಿಯಲ್ಲಿ, ಅಧೀರಂ - ಮೆಲ್ಲಗೆ, ತ್ಯಜ - ಬಿಡು, ಸತಿಮಿರಪುಂಜಂ-ಕಗ್ಗತ್ತಲೆಯಿಂಕೂಡಿದ, ಕುಂಜಂ-ಲತಾಗೃಹವಂ ಕುರಿತು, ಚಲ-ಪೋರಡು ನೀಲನಿಚೋಳಂ, ನೀಲ- ಕಪ್ಪಾದ, ನಿಚೋಳಂ-ಹೊದ್ದಿಕೆಯನ್ನು, ಶೀಲಯ-ಧರಿಸು. ... ... ... ೩॥

ಉರಸಿಮುರಾರೇರುಪಹಿತಹಾರೇಘನಇವತರಳಬಲಾಕೇ ತಟಿದಿವಪೀತೇರತಿವಿ
ಪರೀತೇರಾಜಸಿಸುಕೃತವಿಪಾಕೇ ಧೀರಸಮೀರೇ॥ ಟೀ. ಹೇಪೀತೇ-ಎಲೈಕನ
ಕಾಂಗಿಯೆ, ಉಪಹಿತಹಾರೇ, ಉಪಹಿತ-ಹೊಂದಿಸಲ್ಪಟ್ಟ, ಹಾರೇ-ಮು
ತ್ತಿನಹಾರವುಳ್ಳ, ತರಳಬಲಾಕೇ, ತರಳ-ಚಲಿಸುತಲಿರುವ, ಬಲಾಕೇ-ಕೊಕ್ಕ್ರೆ
ಗಳುಳ್ಳ, ಘನಇವಸ್ಥಿತೇ-ಮೇಘದೋಪಾದಿಯಲ್ಲಿರುವ, ಸುಕೃತವಿಪಾಕೇ,
ಸುಕೃತ-ಪುಣ್ಯದ, ವಿಪಾಕೇ-ಫಲಸ್ವರೂಪವಾದ, ಮುರಾರೇಃ-ಶ್ರೀ
ಕೃಷ್ಣನ, ಉರಸಿ-ವಕ್ಷಸ್ಥಳದಲ್ಲಿ, ರತಿವಿಪರೀತೇ-ಉಪರಿಸುರತದಲ್ಲಿ, ತ
ಟಿದಿವ-ಮಿಂಚಿನಂತೆ, ರಾಜಸಿ-ಪ್ರಕಾಶಿಸುತ್ತೀಯೆ. ... ॥೫॥

ವಿಗಲಿತವಸನಂಪರಿಹೃತರಶನಂಘಟಯಜಘನಮಪಿಧಾನಂ। ಕಿಸಲಯಶ
ಯನೇಪಂಕಜನಯನೇನಿಧಿಮಿವಹರ್ಷನಿದಾನಂ ಧೀರಸಮೀರೇ॥ ಟೀ. ಹೇಪಂ
ಕಜನಯನೇ-ಎಲೈ ಕಮಲದಂತೆ ನೇತ್ರವುಳ್ಳವಳೆ, ಕಿಸಲಯಶಯನೇ, ಕಿಸಲ
ಯ-ತಳಿರ್ಗಳ, ಶಯನೇ-ಹಾಸಿಗೆಯಲ್ಲಿ, ವಿಗಲಿತವಸನಂ, ವಿಗಲಿತ-ಜಗಳಿದ,
ವಸನಂ-ವಸ್ತ್ರವುಳ್ಳ, ಪರಿಹೃತರಶನಂ, ಪರಿಹೃತ-ಕಳೆಯಲ್ಪಟ್ಟ, ರಶನಂ-
ಒಡ್ಯಾಣವುಳ್ಳ, ಅಪಿಧಾನಂ — ಆಚ್ಛಾದನ ರಹಿತವಾದ, ಹರ್ಷನಿದಾನಂ,
ಹರ್ಷ-ಸಂತೋಷಕ್ಕೆ, ನಿದಾನಂ-ಆದಿಕಾರಣವಾದ, ನಿಧಿಮಿವ-ನಿಕ್ಷೇಪ
ವನ್ನೋಪಾದಿಯಲ್ಲಿರುವ, ಜಘನಂ-ಕಟಿಪುರೋಭಾಗವನ್ನು, ಘಟಯ-
ಸೇರಿಸು. ... ... ... ... ॥೬॥

ಹರಿರಭಿಮಾನೀರಜನಿರಿದಾನೀಮಿಯಮುಪಯಾತಿವಿರಾಮಂಕುರುಮಮವ
ಚನಂಸತ್ವರರಚನಂ ಪೂರಯಮಧುರಿಪುಕಾಮಂ ಧೀರಸಮೀರೇ॥ ಟೀ. ಇ
ದಾನೀಂ-ಈಕಾಲದಲ್ಲಿ, ಹರಿಃ-ಶ್ರೀಕೃಷ್ಣನು, ಅಭಿಮಾನೀ-ಪ್ರೀತಿಯುಳ್ಳವ
ನು, ಇಯಂರಜನಿಃ - ಈ ರಾತ್ರಿಯು, ವಿರಾಮಂ - ಅಂತ್ಯವನ್ನು, ಉಪ
ಯಾತಿ - ಹೊಂದುತಲಿಧೆ, ಸತ್ವರರಚನಂ, ಸತ್ವರ - ತ್ವರೆಯೊಡಗೂಡಿ
ದ, ರಚನಂ-ಶೃಂಗಾರರಚನೆಯುಳ್ಳ, ಮಮ - ನನ್ನ, ವಚನಂ- ನುಡಿಯ
ನ್ನು, ಕುರು-ಮಾಡು, ಮಧುರಿಪುಕಾಮಂ, ಮಧುರಿಪು - ಶ್ರೀಕೃಷ್ಣನ,
ಕಾಮಂ-ಅಭಿಲಾಷೆಯನ್ನು, ಪೂರಯ-ಪೂರ್ತಿಮಾಡು. ... ॥೭॥

ಶ್ರೀಜಯದೇವೇಕೃತಹರಿಸೇವೇಭಣತಿಪರಮರಮಣೀಯಂ। ಪ್ರಮುದಿತಹೃದ
ಯಂಹರಿಮತಿಸದಯಂ ನಮತಸುಕೃತಕಮನೀಯಂ ಧೀರಸಮೀರೇ॥

ಟೀ. ಕೃತಹರಿಸೇವೇ, ಕೃತ-ಮಾಡಲ್ಪಟ್ಟ, ಹರಿ- ಕೃಷ್ಣನ, ಸೇವೆ-ಭ
ಜನೆವುಳ್ಳ, ಶ್ರೀಜಯದೇವೇ - ಜಯದೇವನೆಂಬ ಕವಿಯು, ಪರಮರಮಣೀ
ಯಂ -ಅತ್ಯಂತ ಮನೋಹರವಾಗಿ, ಭಣತಿಸತಿ-ಹೇಳುತಲಿರಲಾಗಿ, ಪ್ರಮು

ದಿತಹೃದಯಂ, ಪ್ರಮುದಿತ-ಸಂತುಷ್ಟವಾದ, ಹೃದಯಂ - ಮನಸ್ಸುಳ್ಳ, ಅತಿಸದಯಂ - ಅತ್ಯಂತದಯಾಶಾಲಿಯಾದ, ಸುಕೃತಕಮನೀಯಂ, ಸುಕೃತ - ಪುಣ್ಯದಿಂದ, ಕಮನೀಯಂ - ಅಪೇಕ್ಷಿಸುವದಕ್ಕೆ ಯೋಗ್ಯನಾದ, ಹರಿಂ-ಶ್ರೀಕೃಷ್ಣನನ್ನು, ನಮತ- ನಮಸ್ಕರಿಸಿರೀ. ತಾ. ಎಲೈರಾಧೆಯೆ ಕಗ್ಗತ್ತಲೆಯ ಮೊತ್ತದಿಂದತ್ತೆತ್ತಲುಂ ಸುತ್ತುವರಿಯಲ್ಪಟ್ಟ ಬಳ್ಳಿಯಮನೆಯೊಳ್ ನಿನ್ನ ಆಗಮನವನ್ನೇ ನಿರೀಕ್ಷಿಸುತ ನಿನ್ನ ಪೆಸರಿನಿಂದಲೆ ವೇಣುನಾದವಂ ಮಾಡುತಲಿರುವ ಶ್ರೀಕೃಷ್ಣನಂ ಬೇಗದಿಂ ಪೊಂದಿ ಉಪರತಿ ಸಮರತಿಗಳಿಂದಾನಂದ ಪಡಿಸುವಳಾಗು. ... ... ॥೮॥

ಶ್ಲೋ. ಸಾಮಾಂದ್ರಕ್ಷ್ಯತಿವಕ್ಷ್ಯತಿಸ್ಮರಕಥಾಃಪ್ರತ್ಯಂಗಮಾಲಿಂಗನೈಃ ಪ್ರೀತಿಂಯಾಸ್ಯತಿರಂಸ್ಯತೆಸಖಿಸಮಾಗತ್ಯೇತಿಚಿಂತಾಕುಲಃ॥ ಸತ್ವಾಂಪಶ್ಯತಿ ವೇಪತೆಪುಳಕಯತ್ಯಾನಂದತಿಸ್ವಿದ್ಯತಿಪ್ರತ್ಯುದ್ಗಚ್ಛತಿ ಮೂರ್ಛತಿ ಸ್ಥಿರತಮಃ ಪುಂಜೆನಿಕುಂಜೆಸ್ಥಿತಃ॥ ಟೀ. ಹೇಸಖಿ-ಎಲೈರಾಧೆಯೆ, ಸ್ಥಿರತಮಃಪುಂಜೆ, ಸ್ಥಿರ-ದಟ್ಟವಾದ, ತಮಃ-ಅಂಧಕಾರದ, ಪುಂಜೆ-ಸಮೂಹವುಳ್ಳ, ಕುಂಜೆ-ಪೊದರಿನಲ್ಲಿ, ಸ್ಥಿತಃ-ಇರುತಲಿರುವ, ಸಃ-ಆ ಶ್ರೀಕೃಷ್ಣನು, ಸಾ-ಆರಾಧೆಯು, ಮಾಂ-ನನ್ನನ್ನು, ದ್ರಕ್ಷ್ಯತಿ - ನೋಡುತಲಿಧಾಳೆ, ಸ್ಮರಕಥಾಃ, ಸ್ಮರ-ಮನ್ಮಥನ, ಕಥಾಃ-ಕಥೆಗಳನ್ನು, ವಕ್ಷ್ಯತಿ-ಹೇಳುತ್ತಾಳೆ, ಪ್ರತ್ಯಂಗಂ-ಪ್ರತಿಶರೀರದಲ್ಲೂ, ಅಲಿಂಗನೈಃ - ಅಪ್ಪಿಕೊಳ್ಳೋಣದರಿಂದ, ಪ್ರೀತಿಂ-ಅನುರಾಗವನ್ನು, ಯಾಸ್ಯತಿ - ಹೊಂದುತ್ತಾಳೆ, ಸಮಾಗತ್ಯ - ಸಮೀಪವಂ ಪೊಂದಿ, ರಂಸ್ಯತೆ-ಕ್ರೀಡಿಸುತ್ತಾಳೆ, ಇತಿ- ಹೀಗೆಂಬ, ಚಿಂತಾಕುಲಃ, ಚಿಂತಾ-ಧ್ಯಾನದಿಂದ, ಆಕುಲಃ - ವ್ಯಾಕುಲನಾಗಿ, ತ್ವಾಂ - ನಿನ್ನನ್ನು, ಪಶ್ಯತಿ-ನೋಡುತ್ತಾನೆ, ವೇಪತೆ-ನಡಗುತ್ತಾನೆ, ಪುಳಕಯತಿ-ರೋಮಾಂಚವಿಡುತ್ತಾನೆ, ಆನಂದತಿ- ಸಂತೋಷಪಡುತ್ತಾ, ಸ್ವಿದ್ಯತಿ - ಬೆದರುತಲಿಧಾನೆ, ಪ್ರತ್ಯುದ್ಗಚ್ಛತಿ - ಯದುರುಗೊಳ್ಳುತ್ತಾನೆ, ಮೂರ್ಛತಿ - ಮೂರ್ಛೆ ಹೊಂದುತ್ತಾನೆ. ತಾ. ಆ ಕೃಷ್ಣನು ವಿವಿಧವಾದ ನಿನ್ನ ಕ್ರೀಡಾಚಾತುರ್ಯಮಂ ಚಿಂತಿಸುತ ಪರಿಪರಿಯಾದ ಮನ್ಮಥಾವಸ್ಥೆಯಂ ಪೊಂದುತಲಿಧಾನೆ.

ಶ್ಲೋ. ವಿಕಿರತಿಮುಹುಃಶ್ವಾಸಾನಾಶಾಃಪುರೋಮುಹುರೀಕ್ಷತೆಪ್ರವಿಶತಿಮುಹುಃ ಕುಂಜಂಗುಂಜನ್ಮುಹುರ್ಬಹುತಾಮ್ಯತಿ॥ ರಚಯತಿಮುಹುಶ್ಶಯ್ಯಾಂಪರ್ಯಾಕುಲಂಮುಹುರೀಕ್ಷತೆ ಮದನಕದನಕ್ಲಾಂತಃ ಕಾಂತೆಪ್ರಿಯಸ್ತವವರ್ತತೆ॥ ಟೀ. ಹೇಕಾಂತೇ- ಎಲೈ ಮನಸ್ಸೇ..ಯುಳ್ಳವಳಾದ ರಾಧೆಯೆ,

ತವ-ನಿನ್ನ, ಪ್ರಿಯಃ-ನಾಯಕನಾದ, ಶ್ರೀಕೃಷ್ಣನು, ಮುಹುಃ- ಭಾರಿಭಾರಿಗೂ, ನಾಸಾಶ್ವಾಸಾಣ್ -ನಿಟ್ಟುಸುರುಗಳನ್ನು, ವಿಕರತಿ- ಎರಚುತಲಿಧಾನೆ, ಮುಹುಃ-ಭಾರಿಭಾರಿಗೂ, ಪುರಃ-ಮುಂದಡೆಯೊಳ್, ಈಕ್ಷತೆ- ನೋಡುತಲಿಧಾನೆ, ಮುಹುಃ-ಭಾರಿಭಾರಿಗೂ, ಕುಂಜ-ಲತಾಗೃಹವನ್ನು, ಪ್ರವಿಶತಿ - ಪ್ರವೇಶಿಸುತಲಿಧಾನೆ, ಮುಹುಃ - ಪ್ರತಿಕ್ಷಣದಲ್ಲೂ, ಗುಂಜನ್ಸ್- ಕೂಗುತಲಿರುವನಾಗಿ, ಬಹು - ಬಹಳವಾಗಿ, ತಾಮ್ಯತಿ - ಸಂತಾಪಪಡುತಲಿಧಾನೆ, ಮುಹುಃ-ಪ್ರತಿಕ್ಷಣದಲ್ಲೂ, ಶಯ್ಯಾಂ-ಹಾಸಿಗೆಯನ್ನು, ರಚಯತಿ - ಕಲ್ಪಿಸುತಲಿಧಾನೆ, ಮುಹುಃ - ಭಾರಿಭಾರಿಗೂ, ಪರ್ಯಾಕುಲಂ-ವ್ಯಾಕುಲವಾಗಿರೋಣ ಹ್ಯಾಗೊ ಹಾಗೆ, ಈಕ್ಷತೆ — ನೋಡುತಲಿಧಾನೆ, ಮದನಕದನಕ್ಲಾಂತಸ್ಸ್, ಮದನಕದನ — ಮನ್ಮಥನ ಬಾಧೆಯಿಂದ, ಕ್ಲಾಂತಸ್ಸ್ - ಬಾಡಿರುವನಾಗಿ, ವರ್ತತೆ - ಇಧಾನೆ. ತಾ. ಈ ಪರಿಯಿಂ ಶ್ರೀ ಕೃಷ್ಣನು ನಿನ್ನ ವಿರಹದಿಂದ ಬಹು ಪರಿಯಾಗಿ ಹಂಬಲಿಸುತಲಿಧಾನೆ.

ಶ್ಲೋ. ತ್ವದ್ವಾಮ್ಯನಸಮಂಸಮಗ್ರಮಧುನಾತಿಗ್ಮಾಂಶುರಸ್ತಂಗತೊ ಗೊವಿಂದಸ್ಯಮನೊರಥೆನಚಸಮಂಪ್ರಾಪ್ತಂತಮಸ್ಸಾಂದ್ರತಾಂ। ಕೊಕಾನಾಂಕರುಣಸ್ವನೆನಸದೃಶೀದೀರ್ಘಾಮದಭ್ಯರ್ಥನಾತನ್ಮುಗ್ಧೆವಿಫಲಂವಿಲಂಬನಮಸೌರಮ್ಯೊಭಿಸಾರಕ್ಷಣಃ॥ ಟೀ. ಹೇ ಮುಗ್ಧೆ-ಎಲೈ ಮೂಢೆಯೆ, ಅಧುನಾ-ಈಗ, ತಿಗ್ಮಾಂಶುಃ-ಸೂರ್ಯನು, ತ್ವದ್ವಾಮ್ಯನಸಮಂ, ತ್ವತ್-ನಿನ್ನ, ವಾಮ್ಯನಸಮಂ-ವಕ್ರಭಾವದೊಡಗೂಡಿ, ಸಮಗ್ರಂ - ಸಂಪೂರ್ಣವಾಗಿ, ಅಸ್ತಂಗತಃ-ಅಸ್ತಮಯವಂ ಪೊಂದಿದನು, ತಮಶ್ಚ - ಅಂಧಕಾರವು ಕೂಡ, ಗೋವಿಂದಸ್ಯ-ಶ್ರೀಕೃಷ್ಣನ, ಮನೋರಥೇನಸಮಂ- ಅಭಿಲಾಷೆಯೊಡನೆಕೂಡ, ಸಾಂದ್ರತಾಂ-ನಿಬಡತ್ವವನು, ಪ್ರಾಪ್ತಂ-ಹೊಂದಿತು, ದೀರ್ಘ - ದೀರ್ಘವಾದ, ಮದಭ್ಯರ್ಥನಾ, ಮತ್ - ನನ್ನ, ಅಭ್ಯರ್ಥನಾ-ಯಾಚನೆಯು, ಕೊಕಾನಾಂ-ಚಕ್ರವಾಕಪಕ್ಷಿಗಳ, ಕರುಣಸ್ವನೇನ-ದೀನಸ್ವರದೊಡನೆ, ಸದೃಶೀ-ಸಮಾನವಾಗಿಧೆ, ತತ್- ಆದಕಾರಣದ್ದೆಸೆಯಿಂದ, ವಿಲಂಬನಂ-ತಾವಕಾಶವು, ವಿಫಲಂ-ವ್ಯರ್ಥವು, ಅಸೌ-ಈ, ಅಭಿಸಾರಕ್ಷಣಃ-ಕಾಂತಸಂಪೊಂದತಕ್ಕ ಕಾಲವು, ರಮ್ಯಃ-ಮನೋಹರವಾದುದು.

ತಾ. ಎಲೈ ರಾಧೆಯೆ ಸೂರ್ಯನು ಅಸ್ತಮಯವಂ ಪೊಂದಲು ಕಗ್ಗತ್ತಲೆಯು ತುಂಬಿದ ಬಳಿಕ ಚಕ್ರ ಪಕ್ಷಿಗಳ ರೋದನಂದತಿರುವ ನಂಸ ಪ್ರಾರ್ಥನೆಯಂ ಲಾಲಿಸಿ ವಕ್ರ ಭಾವವಂ ಬಿಟ್ಟು ಅತ್ಯಂತ ಪ್ರತ್ಯಭಿಲಾ

ಪೆಯುಳ್ಳ ಕೃಷ್ಣನ ಬಳಿಯಂ ವೇಗದಿಂ ಪೊಂದಲೋಸುಗ ಈ ಚಂದ್ರೋದ
ಯ ಕಾಲವು ರಮಣೀಯ ವಾಗಿರುವದು.

ಶ್ಲೋ. ಆಶ್ಲೇಷಾದನುಚುಂಬನಾದನುನಖೋಲ್ಲೇಖಾದನುಸ್ವಾಂತಜಪ್ರೋ
ದ್ಬೋಧಾದನುಸಂಭ್ರಮಾದನುರತಾರಂಭಾದನು ಪ್ರೀತಯೋಃ ಅನ್ಯಾರ್ಥಂ
ಗತಯೋರ್ಭ್ರಮನ್ಮಿಳಿತಯೋಸ್ಸಂಭಾಷಣೈರ್ಜಾನತೋರ್ದಂಪತ್ಯೋರಿಹಕೋ
ನುಕೋನುತಮಸಿವ್ರೀಡಾವಿಮಿಶ್ರೋರಸಃ॥ ಟೀ. ಆಶ್ಲೇಷಾತ್-ಆಲಿಂಗನದ್ದ
ಸೆಯಿಂದಲೂ, ಅನು-ಅನಂತರದಲ್ಲಿ, ಚುಂಬನಾತ್-ಅಧರಪಾನದ್ದಸೆಯಿಂದ
ಲೂ, ಅನು-ಬಳಿಕ, ನಖೋಲ್ಲೇಖಾತ್-ನಖಕ್ಷತದ್ದಸೆಯಿಂದಲೂ, ಅನು-ತ
ರುವಾಯ, ಸ್ವಾಂತಜಪ್ರೋದ್ಬೋಧಾತ್, ಸ್ವಾಂತಜ-ಮನಸ್ಸಿನೊಳ್ ಪುಟ್ಟಿದ
ಪ್ರೋದ್ಬೋಧಾತ್-ಮನ್ಮಥವಿಕಾರ ದ್ದಸೆಯಿಂದಲೂ, ಅನು-ಬಳಿಕ, ಸಂಭ
ಮಾತ್-ತ್ವರೆಯುದಸೆಯಿಂದಲೂ, ಅನು-ಬಳಿಕ, ರತಾರಂಭಾತ್, ರತ-ಸು
ರತದ, ಅರಂಭಾತ್-ಪ್ರಾರಂಭದ್ದಸೆಯಿಂದಲೂ, ಅನು-ಅನಂತರದಲ್ಲಿ,ಪ್ರೀ
ತಯೋಃ- ಸಂತೋಷಪಡುತಲಿರುವ, ಅನ್ಯಾರ್ಥಂ- ಮತ್ತೊಬ್ಬರ ನಿಮಿ
ತ್ತವಾಗಿ, ಗತಯೋಃ-ಪೊರಮಟ್ಟ, ಇಹತಮಸಿ-ಈ ಅಂಧಕಾರದಲ್ಲಿ ಭ್ರ
ಮಾತ್-ಭ್ರಾಂತಿಯುದಸೆಯಿಂದ, ಮಿಳಿತಯೋಃ-ಸೇರಿಕೊಂಡ ಸಂಭಾಷ
ಣೈಃ-ಮಾತಾಡೋಣದರಿಂ, ಜಾನತೋಃ- ತಿಳಿಯುತಲಿರುವ, ದಂಪತ್ಯೋಃ-
ಸ್ತ್ರೀಪುರುಷರುಗಳ, ವ್ರೀಡಾವಿಮಿಶ್ರಃ, ವ್ರೀಡಾ-ಲಜ್ಜೆಯಿಂದ, ವಿಮಿಶ್ರಃ-
ವ್ಯಾಪ್ತವಾದ, ರಸಃ-ರಸವು, ಕೋನುಕೋನು-ಯಾವಯಾವದು.

ತಾ. ಎಲೈ ರಾಧಯೆ ಯಾಕಾರ್ಗತ್ತಲೆಯೊಳು ತಮ್ಮ ತಮ್ಮ ಪ್ರಿ
ಯಜನಗಳಂ ಕುರಿತು ಪೊರಮಟ್ಟ ಸ್ತ್ರೀಪುರುಷರು ಭ್ರಾಂತಿಯಿಂ ಮ
ತ್ತೋರ್ವರೊರ್ವರೊಡಗೂಡಿ ಆಲಿಂಗನ ಮೊದಲಾದ ಸುರತ ಮಹೋ
ತ್ಸವದಿಂ ಸಂತೋಷಪಟ್ಟು ಬಳಿಕ ಲಜ್ಜೆಗೊಂಡು ತೆರಳುತಲಿಧಾರೆ.

ಶ್ಲೋ. ಸಭಯಚಕಿತಂವಿನ್ಯಸ್ಯಂತಿಂದೃಶೌತಿಮಿರೆಪಥಿಪ್ರತಿತರುಮುಹು
ಸ್ಥಿತ್ವಾಮಂದಂಪದಾನಿವಿತನ್ವತಿಂ ಕಥಮಪಿರಹಃಪ್ರಾಪ್ತಾಮಂಗೈರನಂಗತ
ರಂಗಿಭಿಸ್ಸುಮುಖಿಸುಭಗಃ ಪಶ್ಯನ್ಸತ್ವಾಮುಪೈತುಕೃತಾರ್ಥತಾಂ.

ಟೀ. ಹೇಸುಮುಖಿ - ಎಲೈ ರಾಧೆಯೆ, ಸಭಯಚಕಿತಂ - ಭಯುಸಂ
ಭ್ರಾಂತಿಯೊಡನೆ ಕೂಡಿಕೊಂಡಿರೋಣ ಹ್ಯಾಗೋ ಹಾಗೆ, ದೃಶೌ-
ನೇತ್ರಗಳನ್ನು, ಪಥಿ-ಮಾರ್ಗದಲ್ಲಿ, ತಿಮಿರೆ-ಕತ್ತಲೆಯಲ್ಲಿ, ವಿನ್ಯಸ್ಯಂತೀ- ಇ
ರುಸುತಲಿರುವ, ಅನಂಗತರಂಗಿಭಿಃ, ಅನಂಗ-ಮನ್ಮಥನಿಂದ, ತರಂಗಿಭಿಃ-
ಚಂಚಲಗಳಾದ, ಅಂಗೈಃ-ಅವಯವಗಳಿಂದ, ಪ್ರತಿತರು-ಪ್ರತಿವೃಕ್ಷದಲ್ಲೂ

ಮುಹುಃ - ಭಾರಿಭಾರಿಗೂ, ಸ್ಥಿತ್ವಾ - ನಿಂತು, ಪದಾನಿ - ಅಡಿಗಳನ್ನು, ಮಂದಂ - ಮೆಲ್ಲಮೆಲ್ಲಗೆ, ವಿತನ್ವತೀಂ - ವಿಸ್ತರಿಸುತಲಿರುವ, ಕಥಮಪಿ-- ಅತಿಪ್ರಯಾಸವಾಗಿ, ರಹಃ - ಏಕಾಂತಸ್ಥಳವನ್ನು, ಪ್ರಾಪ್ತಾಂ - ಹೊಂದಿದ, ತ್ವಾಂ - ನಿನ್ನನ್ನು, ಸುಭಗಃ - ಮನೋಹರನಾದ, ಸಃ - ಶ್ರೀಕೃಷ್ಣನು, ಪಶ್ಯನ್-ನೋಡುತಲಿರುವನಾಗಿ, ಕೃತಾರ್ಥತಾಂ-ಧನ್ಯತ್ವವನ್ನು, ಉಪೈತು-ಹೊಂದಲಿ.

ತಾ॥ ಈ ಕಗ್ಗತ್ತಲೆಯೊಳ್ ಪೊರಮಡಲಂಜಿ ಅಲ್ಲಲ್ಲಿ ನಿಂತು ಮೆಲ್ಲಮೆಲ್ಲನೆ ಅಡಿಗಳನ್ನಿಡುತ ತನ್ನಬಳಿಯಂಪೊಂದಿದ ನಿನ್ನಂ ನೋಡಿ ಶ್ರೀಕೃಷ್ಣನು ಧನ್ಯನಾಗಲಿ.

ಗೀತಗೋವಿಂದ ಮಹಾಕಾವ್ಯದರಸಿಕರಂ
ಜನೀಯೆಂಬ ಟೀಕಿನೊಳ್ ಐದನೇ
ಸರ್ಗ ಸಂಪೂರ್ಣವಾದುದು.

ಶ್ಲೋ. ಅಥತಾಂಗಂತುಮಶಕ್ತಾಂಚಿರಮನುರಕ್ತಾಂ ಲತಾಗೃಹೆದೃಷ್ಟ್ವಾ॥ ತಚ್ಚರಿತಂಗೋವಿಂದೆಮನಸಿಜಮಂದೆಸಖೀಪ್ರಾಹ॥ ... ॥೩೭॥

ಟೀ. ಅಥ - ಅನಂತರದಲ್ಲಿ, ಗಂತುಂ -- ಶ್ರೀಕೃಷ್ಣನಸಮೀಪವಂ ಪೊಂದಲೋಸುಗ, ಅಶಕ್ತಾಂ- ಅಸಮರ್ಥಳಾದ, ಚಿರಂ - ಬಹುಕಾಲವಾಗಿ, ಅನುರಕ್ತಾಂ - ಅನುರಾಗದಿಂ ಕೂಡಿರುವ, ತಾಂ - ಆ ರಾಧೆಯನ್ನು, ಲತಾಗೃಹೆ -- ಪೊದರಿನಲ್ಲಿ, ದೃಷ್ಟ್ವಾ - ನೋಡಿ, ತಚ್ಚರಿತಂ, ತತ್ -- ಆರಾಧೆಯ, ಚರಿತಂ - ಚರಿತ್ರವನ್ನು, ಮನಸಿಜಮಂದೆ, ಮನಸಿಜ - ಮನ್ಮಥನಿಂದ, ಮಂದೆ - ಬಳಲಿದ, ಗೋವಿಂದೆ -ಶ್ರೀಕೃಷ್ಣನಲ್ಲಿ, ಸಖೀ-- ಕೆಳದಿಯು, ಪ್ರಾಹ-ಪೇಳಿದಳು. ತಾ. ಅನಂತರದೊಳ್ ಸಖಿಯು ಶ್ರೀಕೃಷ್ಣನ ಸಮೀಪವಂ ಪೊಂದಲಶಕ್ತಳಾದ ರಾಧೆಯಂ ನೋಡಿ ಅವಳ ಚರಿತ್ರವಂ ಶ್ರೀಕೃಷ್ಣನಂಕುರಿತು ವಿವರಿಸುತ್ತಾಳೆ.

ಶ್ರೀ ದ್ವಾದಶಾಷ್ಟಪದೀ ಪ್ರಾರಂಭಃ.

ರಾಗ--ಶಂಕರಾಭರಣ.

ಪಶ್ಯತಿದಿಶಿದಿಶಿರಹಸಿಭವಂತಂ ತದಧರಮಧುರಮಧೂನಿಪಿಬಂತಂ ॥೧॥ ನಾಥಹರೆಜಗನ್ನಾಥಹರೆ-ಸೀದತಿರಾಧಾವಾಸಗೃಹೆ-ನಾಥಹರೆಜಗನ್ನಾಥಹರೆ.

ಟೀ. ಜಗನ್ನಾಥ - ಲೋಕನಾಯಕನಾದ, ಹೆನಾಥಹರೆ - ಎಲ್ಲೈಸ್ವಾಮಿಯಾದ ಶ್ರೀಕೃಷ್ಣನೆ, ರಾಧಾ - ರಾಧೆಯು, ರಹಸಿ - ಏಕಾಂತದಲ್ಲಿ, ತದಧರಮಧುರಮಧೂನಿ, ತತ್ - ಆರಾಧೆಯ, ಅಧರ -- ತುಟಿಗ

ಳ, ಮಧುರ-ಸವಿಯೊಡಗೂಡಿದ, ಮಧೂನಿ-ಜೇನುತ್ತುಪ್ಪಗಳನ್ನು, ಪಿಬಂತಂ- ಪಾನಮಾಡುತಲಿರುವ, ಭವಂತಂ - ನಿನ್ನನು, ದಿಶಿದಿಶಿ -- ದಿಕ್ಕುದಿಕ್ಕುಗಳಲ್ಲಿ, ಪಶ್ಯತಿ-ನೋಡುತಲಿಧಾಳೆ, ವಾಸಗೃಹೆ-ವಾಸಮಾಡುವಮನೆಯಲ್ಲಿ, ಸೀದತಿ-ದುಃಖಪಡುತಲಿಧಾಳೆ. ... ... ॥೧॥

ತ್ವದಭಿಸರಣರಭಸೇನವಲಂತೀಪತತಿಪದಾನಿಕಿಯಂತಿಚಲಂತೀ ॥ನಾಥ॥೨

ಟೀ. ಹೆಹರೆ-ಎಲೈಕೃಷ್ಣನೆ, ತ್ವದಭಿಸರಣರಭಸೇನ, ತ್ವತ್ - ನಿನ್ನ, ಅಭಿಸರಣ - ಹೊಂದೋಣದರ, ರಭಸೇನ - ವೇಗದಿಂದ, ವಲಂತೀ - ಇರುತಲಿರುವರಾಧೆಯು, ಕಿಯಂತಿಪದಾನಿ-ಕೆಲವುಹೆಜ್ಜೆಗಳನ್ನು, ಚಲಂತೀ-ಹೊರಡುವಳಾಗಿ, ಪತತಿ- ಬೀಳುತಳಿಧಾಳೆ. ... ... ॥೨॥

ವಿಹಿತವಿಶದಬಿಸಕಿಸಲಯವಲಯಾಜೀವತಿಪರಮಿಹತವರತಿಕಲಯಾ ॥೩॥

ಟೀ. ಹೆಹರೆ - ಎಲೈ ಶ್ರೀಕೃಷ್ಣಸ್ವಾಮಿಯೆ, ವಿಹಿತವಿಶದಬಿಸಕಿಸಲಯವಲಯಾ, ವಿಹಿತ - ಮಾಡಲ್ಪಟ್ಟ, ವಿಶದ - ಸ್ವಚ್ಛವಾದ, ಬಿಸಕಿಸಲಯ -- ಯುಳದಾವರೆದಂಟಿನ, ವಲಯಾ - ಕಡಗಗಳುಳ್ಳ ರಾಧೆಯು, ಇಹ - ಈ ಸಮಯದಲ್ಲಿ, ಪರಂ - ಅತ್ಯಂತವಾಗಿ, ತವ -- ನಿನ್ನ, ರತಿಕಲಯಾ, ರತಿ - ಕ್ರೀಡೆಯ, ಕಲಯಾ - ಅಂಶಯಿಂದ, ಜೀವತಿ -- ಬದುಕುತಲಿಧಾಳೆ. ... ... ... ... ... ॥೩॥

ಮುಹುರವಲೋಕಿತಮಂಡನಲೀಲಾಮಧುರಿಪುರಹಮಿತಿಭಾವನಶೀಲಾ ॥೪॥

ಟೀ. ಮುಹುಃ - ಭಾರಿಭಾರಿಗೂ, ಅವಲೋಕಿತಮಂಡನಲೀಲಾ, ಅವಲೋಕಿತ -- ನೋಡಲ್ಪಟ್ಟ, ಮಂಡನ - ಅಲಂಕಾರದ, ಲೀಲಾ -- ವಿಲಾಸವುಳ್ಳ, ಅಹಂ - ನಾನು, ಮಧುರಿಪುಃ - ಶ್ರೀಕೃಷ್ಣನು, ಇತಿ-ಹೀಗೆಂಬದಾಗಿ, ಭಾವನಶೀಲಾ, ಭಾವನ - ಭಾವಿಸೋಣವೆ, ಶೀಲಾ -ಸ್ವಭಾವವಾಗಿಉಳ್ಳರಾಧೆಯು ಸೀದತಿ ... ... ॥೪॥

ತ್ವರಿತಮುಪೈತಿನಕಥಮಭಿಸಾರಂಹರಿರಿತಿವದತಿಸಖೀಮನುವಾರಂ ॥೫॥

ಟೀ. ಹೆಹರೆ - ಎಲೈಕೃಷ್ಣನೆ, ರಾಧಾ - ರಾಧೆಯು, ಹರಿಃ - ಶ್ರೀಕೃಷ್ಣನು, ಅಭಿಸಾರಂ - ಸಂಕೇತಸ್ಥಾನವನ್ನು, ತ್ವರಿತಂ - ಶೀಘ್ರವಾಗಿ, ಕಥಂ - ಹ್ಯಾಗೆ, ನೋಪೈತಿ -- ಹೊಂದುವದಿಲ್ಲ, ಇತಿ-- ಹೀಗೆಂದು, ಸಖೀಂ - ಕೆಳದಿಯಂಕುರಿತು, ಅನುವಾರಂ - ಪ್ರತಿಕ್ಷಣದಲೂ, ವದತಿ -- ಹೇಳುತಲಿಧಾಳೆ. ... ... ... ॥೫॥

ಶ್ಲಿಷ್ಯತಿಚುಂಬತಿಜಲಧರಕಲ್ಪಂಹರಿರುಪಗತಇತಿತಿಮಿರಮನಲ್ಪಂ ॥೬॥

ಟೀ. ಹೆಹರೆ - ಎಲೈಕೃಷ್ಣನೆ, ರಾಧಾ - ರಾಧೆಯು, ಜಲಧರಕಲ್ಪಂ,

ಜಲಧರ-ಮೇಘದೊಡನೆ, ಕಲ್ಪಂ-ಸಮಾನವಾದ, ಅನಲ್ಪಂ- ಅಧಿಕವಾದ, ತಿಮಿರಂ-ಅಂಧಕಾರವನ್ನು, ಹರಿಃ-ಶ್ರೀಕೃಷ್ಣನು, ಉಪಗತಃ-ಬಂದನು, ಇತಿ- ಹೀಗೆಂದು, ಶ್ಲಿಷ್ಯತಿ-ಅಪ್ಪಿಕೊಳ್ಳುತ್ತಾಳೆ, ಚುಂಬತಿ-ಮುತ್ತಿಕ್ಕುತ್ತಾಳೆ.

ಭವತಿವಿಳಂಬಿನಿವಿಗಳಿತಲಜ್ಜಾವಿಲಪತಿರೋದಿತಿವಾಸಕಸಜ್ಜಾ ನಾಥಹರೇ ॥೭॥

ಟೀ. ಹೇಹರೆ-ಎಲೈಕೃಷ್ಣನೆ, ವಾಸಕಸಜ್ಜಾ - ವಾಸಕಸಜ್ಜೆಯೆಂಬನಾಯಕಿಯಾದ ರಾಧೆಯು, ಭವತಿ - ನೀನು, ವಿಳಂಬಿನಿಸತಿ, ಸಾವಕಾಶಮಾಡುತಿರಲಾಗಿ, ವಿಗಳಿತಲಜ್ಜಾ, ವಿಗಳಿತ -- ಹೋಗಲಾಡಿಸಲ್ಪಟ್ಟ, ಲಜ್ಜಾ- ನಾಚಿಕೆಯುಳ್ಳವಳಾಗಿ, ವಿಲಪತಿ -- ಪ್ರಲಾಪಮಾಡುತಲಿದ್ದಾಳೆ, ರೋದಿತಿ - ಅಳುತಲಿದ್ದಾಳೆ. ... ... ... ... ॥೭॥

ಶ್ರೀಜಯದೇವಕವೇರಿದಮುದಿತಂರಸಿಕಜನಂತನುತಾಮತಿಮುದಿತಂ ॥೮॥
ನಾಥಹರೇಜಗನ್ನಾಥಹರೇ-ಸೀದತಿರಾಧಾವಾಸಗೃಹೇ- ನಾಥಹರೇಜಗನ್ನಾಥಹರೇ.

ಟೀ. ಶ್ರೀಜಯದೇವಕವಿಃ - ಜಯದೇವನೆಂಬಕವಿಯು, ಇದಂ -- ಈ, ಉದಿತಂ-ವಾಕ್ಯ, ರಸಿಕಜನಂ-ರಸಜ್ಞರಾದ ಜನಗಳನ್ನು, ಅತಿಮುದಿತಂ- ಅತ್ಯಂತಸಂತುಷ್ಟರನ್ನಾಗಿ, ತನುತಾಂ-ಮಾಡಲಿ.

ತಾ. ಎಲೈಕೃಷ್ಣನೆ ಆರಾಧೆಯು ಅಲಂಕೃತಳಾಗಿ ಕ್ರೀಡಾಗೃಹವಂ ಶೃಂಗರಗೈದು ಪ್ರತಿದಿಕ್ಕುಗಳಲ್ಲಿ ನಿನ್ನಂ ನೋಡುತ ಅಂಧಕಾರವನ್ನು ನೀನೆಂಬ ಭ್ರಮೆಯಿಂದಪ್ಪಿಕೊಳ್ಳುತ ವಿರಹ ವೇದನೆಯಿಂ ಬಳಲಿ ನಿನ್ನ ಬಳಿಯಂ ಕುರಿತು ತೆರಳಲೋಸುಗ ಅಸಮರ್ಥಳಾಗಿದ್ಧಾಳೆ.

ಶ್ಲೋ. ವಿಪುಲಪುಳಕಪಾಳಿಸ್ಸ್ಫೀತಸೀತ್ಕಾರಮಂತರ್ಜನಿತಜಡಿಮಕಾಕು ರಾಕುಲಂವ್ಯಾಹರಂತೀ। ತವಕಿತವವಿಧತ್ತೇಮಂದಕಂದರ್ಪಚಿಂತಾಂರಸಜಲಧಿನಿಮಗ್ನಾಧ್ಯಾನಲಗ್ನಾಮೃಗಾಕ್ಷೀ. ... • ... ॥೩೭॥

ಟೀ. ಹೇಕಿತವ - ಎಲೈವಂಚಕನಾದ ಕೃಷ್ಣನೆ, ಮೃಗಾಕ್ಷೀ - ರಾಧೆಯು, ವಿಪುಲಪುಳಕಪಾಳಿಃ, ವಿಪುಲ - ವಿಸ್ತಾರವಾದ - ಪುಳಕ- ರೋಮಾಂಚಗಳ -- ಪಾಳಿಃ - ಪಙ್ಕ್ತಿಯುಳ್ಳವಳಾಗಿ, ಸ್ಫೀತಸೀತ್ಕಾರಂ, ಸ್ಫೀತ-ವೃದ್ಧಿಹೊಂದಿದ, ಸೀತ್ಕಾರಂ -- ಸೀತ್ಕಾರವುಳ್ಳದೋ ಹ್ಯಾಗೋ ಹಾಗೆ, ಅಂತಃ -- ಒಳಗೆ, ಜನಿತಜಡಿಮಕಾಕೂಃ, ಜನಿತ -- ಉಂಟಾದ, ಜಡಿಮ-ಆಲಸ್ಯವುಳ್ಳ, ಕಾಕೂಃ-ವಿಕಾರಸ್ವರಗಳನ್ನು, ಅಕುಲಂ - ವ್ಯಾಕುಲವಾಗಿರೋದೋ ಹ್ಯಾಗೋಹಾಗೆ, ವ್ಯಾಹರಂತಿ -- ಹೇಳುತಲಿರುವಳಾಗಿಯು, ರಸಜಲಧಿನಿಮಗ್ನಾ, ರಸ -- ಅನುರಾಗವೆಂಬ, ಜಲಧಿ -- ಸಮುದ್ರದಲ್ಲಿ, ನಿಮಗ್ನಾ - ಮುಳುಗಿರುವವಳಾಗಿಯು, ತವ -- ನಿನ್ನ, ಧ್ಯಾನಲ

ಗ್ನಾ, ಧ್ಯಾನ-ಸ್ಮರಣೆಯಲ್ಲಿ, ಲಗ್ನಾ - ಸಂಬಂಧಿಸಿಕೊಂಡಿರುವಳಾಗಿಯು, ಅಮಂದಕಂದರ್ಪಚಿಂತಾಂ, ಅಮಂದ-ಅಧಿಕವಾದ, ಕಂದರ್ಪಚಿಂತಾಂ-ಕಾಮವಿಚಾರವನ್ನು, ವಿಧತ್ತೆ-ಮಾಡುತಲಿಧಾಳೆ.

ತಾ. ಎಲೈ ವಂಚಕನಾದ ಕೃಷ್ಣನೆ ರಾಧೆಯು ವಿಶೇಷವಾದ ಅನುರಾಗ ವುಳ್ಳವಳಾಗಿ ನಿನ್ನಂ ಸ್ಮರಿಸುತ ರೋಮಾಂಚಿತಳಾಗಿ ಕಾಕುಸ್ವರದಿಂ ನುಡಿಯುತ ಮನ್ಮಥವಿಚಾರವನ್ನೆ ಮಾಡುತಲಿಧಾಳೆ.

ಶ್ಲೋ. ಅಂಗೇಷ್ವಾಭರಣಂಕರೋತಿಬಹುಶಃಪತ್ರೇಪಿಸಂಚಾರಿಣಿಪ್ರಾಪ್ತಂತ್ವಾಂಪರಿಶಂಕತೆವಿತನುತೆಶಯ್ಯಾಂಚಿರಂಧ್ಯಾಯತಿ ॥ ಇತ್ಯಾಕಲ್ಪವಿಕಲ್ಪತಲ್ಪರಚನಾಸಂಕಲ್ಪಲೀಲಾಶತವ್ಯಾಸಕ್ತಾಪಿ ವಿನಾತ್ವಯಾವರತನುರ್ನೈಷಾನಿಶಾಂನೆಷ್ಯತಿ ॥೩೪॥ (ಗೀತಗೋವಿಂದೆ ದ್ವಾದಶಸ್ಸರ್ಗಸ್ಸಮಾಪ್ತಃ.)

ಟೀ. ವರತನುಃ - ರಾಧೆಯು, ಅಂಗೇಷು-ಅವಯವಗಳಲ್ಲಿ, ಬಹುಶಃ - ಬಹಳವಾಗಿ, ಆಭರಣಂ - ಅಲಂಕಾರವನ್ನು, ಕರೋತಿ - ಮಾಡುತಲಿಧಾಳೆ, ಪತ್ರೇಪಿ-ಎಲೆಯುಕೂಡ, ಸಂಚಾರಿಣಿಸತಿ- ಕದಲುತಿರಲಾಗಿ, ತ್ವಾಂ -- ನಿನ್ನನ್ನು, ಪ್ರಾಪ್ತಂ -- ಬಂದವನನ್ನಾಗಿ, ಪರಿಶಂಕತೆ -- ಊಹಿಸುತಲಿಧಾಳೆ, ಶಯ್ಯಾಂ - ಹಾಸಿಗೆಯನ್ನು, ವಿತನುತೆ -- ವಿಸ್ತರಿಸುತ್ತಾಳೆ, ಚಿರಂ - ಬಹುಕಾಲದವರಿಗೂ, ಧ್ಯಾಯತಿ - ಸ್ಮರಿಸುತಲಿಧಾಳೆ, ಇತಿ -- ಈಪ್ರಕಾರವಾಗಿ, ಆಕಲ್ಪವಿಕಲ್ಪತಲ್ಪರಚನಾಸಂಕಲ್ಪಲೀಲಾಶತವ್ಯಾಸಕ್ತಾಪಿ, ಆಕಲ್ಪ -- ಅಲಂಕಾರವನು, ವಿಕಲ್ಪ -- ಸಂದೇಹವನು, ತಲ್ಪ - ಹಾಸಿಗೆಯು, ರಚನ - ಕಲ್ಪನವನು, ಸಂಕಲ್ಪ -- ಸ್ಮರಣೆಯೆನು ಇವುಗಳೆಂಬ ಲೀಲಾವಿಲಾಸಗಳ, ಶತ - ಅನೇಕದಲ್ಲಿ, ವ್ಯಾಸಕ್ತಾಪಿ - ಆಸಕ್ತಳಾದಾಗ್ಯೂ, ತ್ವಯಾವಿನಾ - ನಿನ್ನಂಬಿಟ್ಟು, ಎನಾಂನಿಶಾಂ - ಈರಾತ್ರಿಯನ್ನು, ನನೆಷ್ಯತಿ-ಕಳೆಯುವದಿಲ್ಲ.

ತಾ. ಎಲೈ ಕೃಷ್ಣನೆ ರಾಧೆಯು ಸರ್ವದಾ ನಿನ್ನಂ ಧ್ಯಾನಿಸುತ ನಿನ್ನ ಸಂಬಂಧಿಗಳಾದ ವಿಲಾಸಗಳಿಂದಲೆ ಕಾಲವಂ ಕಳೆಯುತ ಲಿರುವಳಾದಾಗ್ಯೂ ಈ ರಾತ್ರಿಯೊಳ್ ನಿನ್ನಂಬಿಟ್ಟಿರಲಾರಳು.

ಗೀತಗೋವಿಂದವೆಂಬ ಮಹಾಕಾವ್ಯದರಸಿಕರಂ
ಜನೀಛಿಂಬ ಟೀಕಿನೊಳ್ ಹನ್ನೆರಡನೇ ಅಷ್ಟ
ಪದೀ-ಆರನೇಸರ್ಗಸಂಪೂರ್ಣವಾದುದು.

ಶ್ಲೋ. ಅತ್ರಾಂತರೆಚಕುಲಟಾಕುಲವರ್ತ್ಮಘಾತಸಂಜಾತಪಾತಕಇವ ಸ್ಫುಟಲಾಂಛನಶ್ರೀಃ ॥ ಬೃಂದಾವನಾಂತರ ಮದೀಪಯದಂಶುಜಾಲೈರ್ದಿ

ಕ್ಸುಂದರೀವದನಚಂದನಬಿಂದುರಿಂದುಃ॥ ... ... ॥೧॥

ಕವಿಯುಚಂದ್ರೋದಯವರ್ಣನೆಯಂಮಾಡುತಲಿದ್ಧಾನೆ.

ಟೀ. ಅತ್ರಾಂತರೇ – ಈಮಧ್ಯದಲ್ಲಿ, ಕುಲಟಾಕುಲವರ್ತ್ಮಪಾತಸಂಜಾತಪಾತಕಇವ, ಕುಲಟಾ — ಜಾರಸ್ತ್ರೀರುಗಳ, ಕುಲ – ಸಮೂಹದ, ವರ್ತ್ಮ – ಮಾರ್ಗವನ್ನು, ಘಾತ — ಕೆಡಿಸೋಣದರಿಂದ, ಸಂಜಾತ — ಉಂಟಾದ, ಪಾತಕಇವ – ಪಾಪವುಳ್ಳವನೋ ಯಂಬಂತೆ, ಸ್ಫುಟಲಾಂಛನಶ್ರೀಃ, ಸ್ಫುಟ – ಪ್ರಕಾಶಮಾನವಾದ, ಲಾಂಛನ – ಕಳಂಕದ, ಶ್ರೀಃ – ಕಾಂತಿಯುಳ್ಳ, ದಿಕ್ಸುಂದರೀವದನಚಂದನಬಿಂದುಃ, ದಿಶ್ – ಪೂರ್ವದಿಕ್ಕೆಂಬ, ಸುಂದರೀ – ಸ್ತ್ರೀಯು, ವದನ – ಮುಖಕ್ಕೆ, ಚಂದನಬಿಂದುಃ – ಗಂಧದಬೊಟ್ಟಿನಂತಿರುವ, ಇಂದುಃ – ಚಂದ್ರನು, ಅಂಶುಜಾಲೈಃ, ಅಂಶು — ಕಿರಣಗಳ, ಜಾಲೈಃ – ಸಮೂಹಗಳಿಂದ, ಬೃಂದಾವನಾಂತರಂ – ಬೃಂದಾವನದಮಧ್ಯಪ್ರದೇಶವನ್ನು, ಅದೀಪಯತ್ – ಪ್ರಕಾಶಮಾಡಿದನು.

ತಾ. ಜಾರಸ್ತ್ರೀರುಗಳು ಸಂಚಾರಕ್ಕಡ್ಡಿಗೈದು ಅವರುಗಳ ಮನೋರಥಭಂಗವಂ ಮಾಡಿದ್ದರಿಂ ಪುಟ್ಟಿದ ಪಾಪವೋ ಯಂಬಂತಿರುವ ಕಳಂಕವುಳ್ಳವನಾಗಿ ಪೂರ್ವದಿಕ್ಕೆಂಬ ರಮಣೀಮುಖಕ್ಕೆ ಗಂಧದ ಬೊಟ್ಟಿನಂತಿರುವ ಚಂದ್ರನುದಯಿಸಿದನು.

ಶ್ಲೋ. ಪ್ರಸರತಿಶಶಧರಬಿಂಬೇವಿಹಿತವಿಲಂಬೇಚಮಾಧವೇರಾಧಾ॥ ವಿರಚಿತವಿವಿಧವಿಲಾಪಾಸಾಪರಿತಾಪಂಚಕಾರೋಚ್ಚೈಃ॥

ಟೀ. ಸಾರಾಧಾ – ಆರಾಧೆಯು, ಶಶಧರಬಿಂಬೇ — ಚಂದ್ರಬಿಂಬವು, ಪ್ರಸರತಿಸತಿ – ಉದಿಸುತಿರಲಾಗಿ, ಮಾಧವೇಚ – ಶ್ರೀಕೃಷ್ಣನುಕೂಡ, ವಿಹಿತವಿಲಂಬೇಸತಿ, ವಿಹಿತ – ಮಾಡಲ್ಪಟ್ಟ, ವಿಲಂಬೇಸತಿ – ಸಾವಕಾಶವುಳ್ಳವನಾಗುತಿರಲಾಗಿ, ವಿರಚಿತವಿವಿಧವಿಲಾಪಾಸತಿ, ವಿರಚಿತ – ಮಾಡಲ್ಪಟ್ಟ, ವಿವಿಧ — ನಾನಾವಿಧವಾದ, ವಿಲಾಪಾಸತಿ — ಪ್ರಲಾಪವುಳ್ಳವಳಾಗಿ, ಉಚ್ಚೈಃ – ಅಧಿಕವಾಗಿ, ಪರಿತಾಪಂ – ಸಂತಾಪವನ್ನು, ಚಕಾರ – ಮಾಡಿದಳು. ತಾ. ಆರಾಧೆಯು ವಿರಹಿಗಳ ಹೃದಯದಹನನಾದ ಚಂದ್ರನುದಯಿಸಿದಾಗಲೂ ಶ್ರೀಕೃಷ್ಣನು ಬಿತ್ತೈಸಲಿಲ್ಲವೆಂದು ಅಧಿಕವಾಗಿ ಸಂತಾಪಪಡುತ್ತಲಿದ್ದಳು.

ತ್ರಯೋದಶಾಷ್ಟಪದೀಪ್ರಾರಂಭಃ. ರಾಗ—ಮಾಳವಿ.

ಕಥಿತಸಮಯೇಪಿಹರಿರಹಹನಯಯೌವನಂ ॥ ಮಮವಿಫಲಮಿದಮಮಲರೂಪಮಪಿಯೌವನಂ ॥೧॥ ಪ್ಲ ॥ ಯಾಮಿಹೇಕಮಿಹಶರಣಂ ॥ ಸಖೀಜನ

ವಚನವಂಚಿತಾಹಂ॥ಯಾಮಿಹೇಕಮಿಹಶರಣಂ.

ರಾಧೆಯು ತನ್ನ ವಿರಹವ್ಯಥೆಯಿಂದ ದೈನ್ಯವುಂಟಾಗಿ ಪ್ರಲಾಪಿಸುತಲಿದ್ದಾಳೆ.

ಟೀ. ಹರಿಃ - ಶ್ರೀಕೃಷ್ಣನು, ಕಥಿತಸಮಯೇಪಿ, ಕಥಿತ - ಹೇಳಲ್ಪಟ್ಟ, ಸಮಯೇಪಿ - ಕಾಲದಲ್ಲಾದರೂ, ವನಂ - ಬೃಂದಾವನವನ್ನು, ನಯಯೌ - ಹೊಂದಲಿಲ್ಲ, ಅಹಹ - ಕಷ್ಟವು, ಮಮ - ನನ್ನ, ಅಮಲರೂಪಮಪಿ, ಅಮಲ - ನಿರ್ಮಲವಾದ, ರೂಪಮಪಿ - ಸೌಂದರ್ಯವುಳ್ಳದ್ದಾದಾಗ್ಯೂಕೂಡ, ಇದಂ - ಈ, ಯೌವನಂ - ವಯಸ್ಸು, ವಿಫಲಂ - ವ್ಯರ್ಥವಾದುದು, ಇಹ - ಈಗ, ಕಂ - ಯಾರನ್ನು, ಶರಣಂ - ರಕ್ಷಕನನ್ನಾಗಿ, ಯಾಮಿ - ಹೊಂದಲಿ, ಅಹಂ - ನಾನು, ಸಖೀಜನವಚನವಂಚಿತಾ, ಸಖೀಜನ - ಸ್ನೇಹಿತಜನಗಳ, ವಚನ - ವಾಕ್ಯದಿಂದ, ವಂಚಿತಾ - ವಂಚಿಸಲ್ಪಟ್ಟೆನು. ... ... ... ॥೧॥

ಯದನುಗಮನಾಯನಿಶಿಗಹನಮಪಿಶೀಲಿತಂ । ತೇನಮಮಹೃದಯಮಿದಮಸಮಶರಕೀಲಿತಂ ॥೨॥ ಯಾಮಿಹೇ.

ಟೀ. ಯದನುಗಮನಾಯ, ಯತ್ - ಯಾವ ಶ್ರೀಕೃಷ್ಣನ, ಅನುಗಮನಾಯ - ಅನುಸರಣಕ್ಕೋಸ್ಕರ, ನಿಶಿ - ರಾತ್ರಿಯಲ್ಲಿ, ಗಹನಮಪಿ - ಅರಣ್ಯವನ್ನೂಕೂಡ, ಶೀಲಿತಂ - ಸಂಚರಿಸಲ್ಪಟ್ಟಿತೋ, ತೇನ - ಆ ಕೃಷ್ಣನಿಂದ, ಮಮ - ನನ್ನ, ಇದಂಹೃದಯಮಪಿ - ಈ ಮನಸ್ಸೂಕೂಡ, ಅಸಮಶರಕೀಲಿತಂ, ಅಸಮಶರ - ಮನ್ಮಥನಿಂದ, ಕೀಲಿತಂ - ಹಿಂಸೆಪಡಿಸಲ್ಪಟ್ಟಿತು. ... ... ... ॥೨॥

ಮಮಮರಣಮೇವವರಮತಿವಿತಥಕೇತನಾ । ಕಿಮಿಹವಿಷಹಾಮಿವಿರಹಾನಲಮಚೇತನಾ ॥೩॥ ಯಾಮಿಹೇ.

ಟೀ. ಮಮ - ನನಗೆ, ಮರಣಮೇವ - ಮೃತ್ಯುವೆ, ವರಂ - ಶ್ರೇಷ್ಠವು, ಅತಿವಿತಥಕೇತನಾ, ಅತಿವಿತಥ - ಅತ್ಯಂತವ್ಯರ್ಥವಾದ, ಕೇತನಾ - ಕ್ರೀಡಾಗೃಹವುಳ್ಳ, ( ನಾನು ) ಅಚೇತನಾಸತಿ - ಮೂರ್ಛೆಗೊಂಡವಳಾಗಿ, ವಿರಹಾನಲಂ - ವಿರಹಾಗ್ನಿಯನ್ನು, ಇಹ - ಈಗ, ಕಿಂವಿಷಹಾಮಿ - ಯಾತಕ್ಕೆ ಸಹಿಸುತ್ತೇನೆ. ... ... ॥೩॥

ಮಾಮಹಹವಿಧುರಯತಿಮಧುರಮಧುಯಾಮಿನೀ । ಕಾಪಿಹರಿಮನುಭವತಿಕೃತಸುಕೃತಕಾಮಿನೀ ॥೪॥ ಯಾಮಿಹೇ.

ಟೀ. ಮಧುರಮಧುಯಾಮಿನೀ, ಮಧುರ - ಮನೋಹರವಾದ,

ಮಧು - ವಸಂತಕಾಲದ, ಯಾಮಿನೀ - ರಾತ್ರಿಯು, ಮಾಂ - ನನ್ನನ್ನು, ವಿಧುರಯತಿ - ವಿಹ್ವಲಳನ್ನಾಗಿ ಮಾಡುತ್ತಲಿದೆ, ಅಹಹ -- ಕಷ್ಟವು, ಕಾಪಿ - ವೊಬ್ಬಾನೊಬ್ಬ, ಕೃತಸುಕೃತಕಾಮಿನೀ, ಕೃತ -- ಮಾಡಲ್ಪಟ್ಟ, ಸುಕೃತ - ಪುಣ್ಯವುಳ್ಳ, ಕಾಮಿನೀ - ಸ್ತ್ರೀಯು, ಹರಿಂ - ಕೃಷ್ಣನನ್ನು, ಅನುಭವತಿ - ಅನುಭವಿಸುತ್ತಲಿದ್ದಾಳೆ. ... ॥೪॥

ಅಹಹಕಲಯಾಮಿವಲಯಾದಿಮಣಿಭೂಷಣಂ। ಹರಿವಿರಹದಹನವಹನೇನ ಬಹುದೂಷಣಂ ॥೫॥ ಯಾಮಿಹೇ.

ಟೀ. ವಲಯಾದಿಮಣಿಭೂಷಣಂ, ವಲಯ - ಕಟಕವೆ, ಆದಿ - ಮೊದಲಾಗಿಯುಳ್ಳ, ಮಣಿಭೂಷಣಂ - ರತ್ನಾಭರಣಂಗಳನ್ನು, ಹರಿವಿರಹದಹನವಹನೇನ, ಹರಿ - ಕೃಷ್ಣನ, ವಿರಹ - ವಿಯೋಗವೆಂಬ, ದಹನ -- ಅಗ್ನಿಯು, ವಹನೇನ -- ವಹಿಸೋಣದರಿಂದ, ಬಹುದೂಷಣಂ, ಬಹು - ಅಧಿಕವಾಗಿ, ದೂಷಣಂ - ದೂಷಿಸತಕ್ಕದ್ದಾಗಿ, ಕಲಯಾಮಿ - ಎಣಿಸುತ್ತೇನೆ, ಅಹಹ - ಕಷ್ಟವು. ... ... ... ॥೫॥

ಕುಸುಮಸುಕುಮಾರತನುಮತನುಶರಲೀಲಯಾಸ್ರಗಪಿಹೃದಿಹಂತಿಮಾಮತಿವಿಷಮಶೀಲಯಾ ॥೬॥ ಯಾಮಿಹೇ.

ಟೀ. ಹೃದಿ - ವಕ್ಷಸ್ಥಲದಲ್ಲಿ, ಸ್ರಗಪಿ - ಪುಷ್ಪಮಾಲೆಯೂಕೂಡ, ಅತಿವಿಷಮಶೀಲಯಾ, ಅತಿವಿಷಮ - ಅತ್ಯಂತಕುಟಿಲವಾದ, ಶೀಲಯಾ - ಸ್ವಭಾವವುಳ್ಳ, ಅತನುಶರಲೀಲಯಾ, ಅತನು - ಮನ್ಮಥನ, ಶರ - ಬಾಣದ, ಲೀಲಯಾ - ವಿಲಾಸದಿಂದ, ಕುಸುಮಸುಕುಮಾರತನುಂ, ಕುಸುಮ -- ಪುಷ್ಪದಂತೆ, ಸುಕುಮಾರ - ಮೃದುವಾದ, ತನುಂ - ಶರೀರವುಳ್ಳ, ಮಾಂ - ನನ್ನನ್ನು, ಹಂತಿ - ಕೊಲ್ಲುತ್ತಲಿದೆ. ... ... ॥೬॥

ಅಹಮಿಹನಿವಸಾಮಿವಿಗಣಿತವೇತಸಾಸ್ಮರತಿಮಧುಸೂದನೋಮಾಮಪಿನ ಚೇತಸಾ ॥೭॥ ಯಾಮಿಹೇ.

ಟೀ. ಅಹಂ - ನಾನು, ಇಹ - ಈಪೊದರಿನಲ್ಲಿ, ವಿಗಣಿತವೇತಸಾ, ವಿಗಣಿತ - ಎಣಿಸಲ್ಪಟ್ಟ, ವೇತಸಾ - ವೇತಸವೆಂಬಲತಾವಿಶೇಷವುಳ್ಳದಾಗಿ, ನಿವಸಾಮಿ - ವಾಸಮಾಡುತ್ತೇನೆ, ಮಧುಸೂದನಃ - ಕೃಷ್ಣನು, ಮಾಂ - ನನ್ನನ್ನು, ಚೇತಸಾಪಿ -- ಮನಸ್ಸಿನಿಂದಲೂಕೂಡ, ನಸ್ಮರತಿ - ಸ್ಮರಿಸುವದಿಲ್ಲ. ... ... ... ॥೭॥

ಹರಿಚರಣಶರಣಜಯದೇವಕವಿಭಾರತೀ ॥ ವಸತುಹೃದಿಯುವತಿರಿವಕೋಮಳಕಳಾವತೀ ॥೮॥ ಯಾಮಿಹೇ.

ಟೀ. ಹರಿಚರಣಶರಣಜಯದೇವಕವಿಭಾರತೀ, ಹರಿ -- ಕೃಷ್ಣನ, ಚರಣ - ಪಾದಂಗಳೆ, ಶರಣ - ರಕ್ಷಣೆ ಳಾಗಿಯುಳ್ಳ, ಜಯದೇವಕವಿ -- ಜಯದೇವನೆಂಬ ಕವಿಯ, ಭಾರತಿ - ವಾಕ್ಯ, ಕೋಮಳಕಳಾವತಿ, ಕೋಮಳ -- ಮನೋಹರವಾದ, ಕಳಾವತಿ -- ಕಾಮಕಳೆಯುಳ್ಳ, ಯುವತಿರಿವ -- ತರುಣಿಯೋಪಾದಿಯಲ್ಲಿ, ಹೃದಿ -- ಮನಸ್ಸಿನಲ್ಲಿ, ವಸತು - ವಾಸಮಾಡಲಿ. ... ... ... ॥೮॥

ತಾ. ಶ್ರೀಕೃಷ್ಣನು ಯಾವ ಪುಣ್ಯಶಾಲಿಯಾದ ರಮಣಿಯೊಡಗೂಡಿ ಕ್ರೀಡಿಸುತ್ತಲಿಹಾನೋ ನನ್ನ ಸೌಂದರ್ಯವು ಅಲಂಕಾರಂಗಳು ಯೌವನವು ವ್ಯರ್ಥವೇಸರಿಯೆಂದು ರಾಧೆಯು ಹಂಬಲಿಸುತ್ತಿದ್ದಳು.

ಶ್ಲೋ ತತ್ಕಿಂಕಾಮಪಿಕಾಮಿನೀಮಭಿಸೃತಃಕಿಂವಾಕಳಾಕೇಳಿಭಿರ್ಬದ್ಧೋ ಬಂಧುಭಿರಂಧಕಾರಿಣಿವನಾಭ್ಯರ್ಣೇಕಿಮುಭ್ರಾಮ್ಯತಿ ॥ ಕಾಂತಃಕ್ಲಾಂತಮನಾಮನಾಗಪಿಪಥಿಪ್ರಸ್ಥಾತುಮೇವಾಕ್ಷಮಃ । ಸ್ಸಂಕೇತೀಕೃತಮಂಜುವಂಜುಳಲತಾಕುಂಜೇಪಿಯನ್ನಾಗತಃ.

ರಾಧೆಯು ಕೃಷ್ಣಾಗಮನವಿಳಂಬವಂಕುರಿತು ತನ್ನೊಳುತಾನೇ ಆಲೋಚಿಸುತ್ತಲಿಹಾಳೆ.

ಟೀ. ಕಾಂತಃ-ಕೃಷ್ಣನು, ಯತ್- ಯಾವಕಾರಣದ್ದೆಸೆಯಿಂದ, ಸಂಕೇತೀಕೃತಮಂಜುವಂಜುಳಲತಾಕುಂಜೆ, ಸಂಕೇತಿಕೃತ -- ಸಂಕೇತಸ್ಥಾನವಾಗಿಮಾಡಲ್ಪಟ್ಟ, ಮಂಜು- ಮನೋಹರವಾದ, ವಂಜುಳ - ಬಗಡೆಮರದ, ಲತಾಕುಂಜೆ-- ಲತಾಗೃಹದಲ್ಲಿ; ಅಪಿ--ಇನ್ನೂ, ನಾಗತಃ-ಬರಲಿಲ್ಲವೋ, ತತ್-ಆಕಾರಣದ್ದೆಸೆಯಿಂದ, ಕಾಮಪಿ-ಒಬ್ಬಾನೊಬ್ಬ, ಕಾಮಿನೀಂ- ವಿಲಾಸಿನೀಯನ್ನು, ಅನುಸೃತಃಕಿಂ-ಅನುಸರಿಸಿದನೇಯೇನು, ಬಂಧುಭಿಃ-- ಬಂಧುಜನಗಳಿಂದ, ಕಳಾಕೇಳಿಭಿರ್ವಾ -- ವಿಲಾಸಕ್ರೀಡೆಗಳಿಂದಲಾಗಲಿ, ಬದ್ಧಃಕಿಂ-ತಡಯಲ್ಪಟ್ಟನೋಯೇನು, ಅಂಧಕಾರಿಣಿ--ಕತ್ತಲೆಯುಳ್ಳ, ವನಾಭ್ಯರ್ಣೇ, ವನ-ಅರಣ್ಯದ, ಅಭ್ಯರ್ಣೇ--ಸಮೀಪದಲ್ಲಿ, ಭ್ರಾಮ್ಯತಿಕಿಮು - ಭ್ರಮಿಸುತ್ತಲಿಹಾನೆಯೋ ಯೇನು, ಕ್ಲಾಂತಮನಾಃ, ಕ್ಲಾಂತ-ಬಳಲಿದ, ಮನಾಃ-ಮನಸ್ಸುಳ್ಳವನಾಗಿ, ಪಥಿ-ಮಾರ್ಗದಲ್ಲಿ, ಮನಾಗಪಿ- ಸ್ವಲ್ಪವೂಕೂಡ, ಪ್ರಸ್ಥಾತುಮೇವ-ಹೊರಡುವದಕ್ಕೋಸ್ಕರಲೆ, ಅಕ್ಷಮಃಕಿಂ- ಸಮರ್ಥನಲ್ಲವೋಯೇನು.

ತಾ. ನನ್ನಂ ಕ್ಷಣಮಾತ್ರವು ಅಗಲಿರಲಾರದ ಶ್ರೀಕೃಷ್ಣನು ಇಂತೀರ್ಪ ಚಂದ್ರೋದಯದೊಳ್ ಇಷ್ಟು ಸಾವಕಾಶವಂ ಮಾಡುವದು

ಬಹಳವಿಚಿತ್ರವಾಗಿದೆ.

ಶ್ಲೋ. ಅಥಾಗತಾಂ ಮಾಧವಮಂತರೇಣಸಖೀಮಿಯಂವೀಕ್ಷ್ಯವಿಷಾದಮೂಕಾಂ॥ ವಿಶಂಕಮಾನಾರಮಿತಂಕಯಾಪಿಜನಾರ್ದನಂದೃಷ್ಟವದೇತದಾಹ॥

ಟೀ. ಅಥ - ಅನಂತರದಲ್ಲಿ, ಇಯಂ - ಈರಾಧೆಯು, ಮಾಧವಂ- ಶ್ರೀಕೃಷ್ಣನನ್ನು, ಅಂತರೇಣ - ಬಿಟ್ಟು, ಆಗತಾಂ -- ಬಂದಿರುವ, ವಿಷಾದಮೂಕಾಂ, ವಿಷಾದ - ದುಃಖದಿಂದ, ಮೂಕಾಂ -- ಮೌನವಂವಹಿಸಿರುವ, ಸಖೀಂ - ಸ್ನೇಹಿತೆಯನ್ನು, ವೀಕ್ಷ್ಯ - ನೋಡಿ, ಜನಾರ್ದನಂ -- ಕೃಷ್ಣನನ್ನು, ಕಯಾಪಿ - ಒಬ್ಬಾನೊಬ್ಬ ಸ್ತ್ರೀಯಿಂದ, ರಮಿತಂ - ಕ್ರೀಡಿಸಲ್ಪಟ್ಟವನನ್ನಾಗಿ, ವಿಶಂಕಮಾನ - ಊಹಿಸುತ್ತಲಿರುವಳಾಗಿ, ಏತತ್-- ಈ ಮುಂದೆಹೇಳುವವಾಕ್ಯವನ್ನು, ದೃಷ್ಟವತ್ -- ನೋಡಲ್ಪಟ್ಟದ್ದನ್ನೋಪಾದಿಯಲ್ಲಿ, ಆಹ - ಹೇಳಿದಳು.

ತಾ. ರಾಧೆಯು ಕೃಷ್ಣನಂಬಿಟ್ಟು ಬಂದಿರುವ ಸಖಿಯಂನೋಡಿ ಶ್ರೀಕೃಷ್ಣನು ಮತ್ತೊರ್ವಳೊಡನೆ ರಮಿಸುತ್ತಲಿರ್ದಾನೆಂದು ತಿಳಿದು ಪ್ರತ್ಯಕ್ಷದೋಳ್ ಕಂಡಂತಿಂತೆಂದಳು.

ಚತುರ್ದಶಾಷ್ಟಪದೀಪ್ರಾರಂಭಃ, ರಾಗ-ವಸಂತಭೈರವಿ.

ಪ॥ ಸ್ಮರಸಮರೋಚಿತವಿರಚಿತವೇಷಾ ॥ ಗಳಿತಕುಸುಮದರವಿಲುಳಿತಕೇಶಾ ॥೧॥ ಧ್ರು॥ ಕಾಪಿಮಧುರಿಪುಣಾ । ಸಹವಿಹರತಿಯುವತಿರಧಿಕಗುಣಾ॥ ಕಾಪಿಮಧು.

ಟೀ. ಸ್ಮರ-ಮನ್ಮಥನ, ಸಮರ- ಯುದ್ಧಕ್ಕೆ, ಉಚಿತ - ಯೋಗ್ಯವಾಗಿರೋಣ ಹ್ಯಾಗೋಹಾಗೆ, ವಿರಚಿತ-ಮಾಡಲ್ಪಟ್ಟ, ವೇಷಾ-ಅಲಂಕಾರವುಳ್ಳ, ಗಳಿತ-ಜಾರಿರುವ, ಕುಸುಮ - ಪುಷ್ಪಗಳುಳ್ಳೋಣ ಹ್ಯಾಗೋಹಾಗೆ, ದರ-ಸ್ವಲ್ಪವಾಗಿ, ವಿಲುಳಿತ-ಕೆದರಲ್ಪಟ್ಟ, ಕೇಶಾ- ಕೂದಲುಗಳುಳ್ಳ, ಅಧಿಕಗುಣಾ, ಅಧಿಕ-ಅತಿಶಯವಾದ, ಗುಣ-ಗುಣಗಳುಳ್ಳ, ಕಾಪಿ- ಒಬ್ಬಾನೊಬ್ಬ, ಯುವತಿಃ-ತರುಣಿಯು, ಮಧುರಿಪುಣಾ- ಶ್ರೀಕೃಷ್ಣನೊಡನೆ, ವಿಹರತಿ-ಕ್ರೀಡಿಸುತ್ತಾಳೆ. ... ... ॥೧॥

ಹರಿಪರಿರಂಭಣಚಲಿತವಿಕಾರಾ। ಕುಚಕಲಶೋಪರಿತರಳಿತಹಾರಾ ॥೨॥ ಕಾಪಿಮಧು॥

ಟೀ. ಹರಿ-ಕೃಷ್ಣನು, ಪರಿರಂಭಣ-ಅಲಿಂಗನದಿಂದ, ಚಲಿತ- ಉಂಟಾದ, ವಿಕಾರ-ಮನ್ಮಥವಿಕಾರವುಳ್ಳ, ಕುಚಕಲಶೋಪರಿ, ಕುಚಕಲಶ-- ಕುಂಭದಂತಿರುವ ಸ್ತನಗಳ, ಉಪರಿ -ಮೇಲೆ, ತರಳಿತಹಾರಾ, ತರಳಿತ-

ಚಂಚಲವಾಗಿಮಾಡಲ್ಪಟ್ಟ, ಹಾರಾ-ಮುಕ್ತಾಹಾರವುಳ್ಳ, ಕಾಪಿ-ವಿಹರತಿ.

ವಿಚಲದಲಕಲಲಿತಾನನಚಂದ್ರಾ । ತದಧರಪಾನರಭಸಕೃತತಂದ್ರಾ ॥೩॥

ಟೀ. ವಿಚಲತ್-ಕದಲುತ್ತಲಿರುವ, ಅಲಕ— ಮುಂಗುರುಳುಗಳಿಂದ, ಲಲಿತ- ಮನೋಹರವಾದ, ಆನನಚಂದ್ರಾ-ಮುಖಚಂದ್ರನುಳ್ಳ, ತತ್- ಆ ಶ್ರೀಕೃಷ್ಣನ, ಅಧರ-ತುಟಿಯ, ಪಾನ-ಚುಂಬನದಲ್ಲಿ, ರಭಸ-ವೇಗದಿಂದ, ಕೃತ-ಮಾಡಲ್ಪಟ್ಟ, ತಂದ್ರಾ-ಆಲಸ್ಯವುಳ್ಳ, ಕಾಪಿ-ಮಧುರಿಪುಣಾ.

ಚಂಚಲಕುಂಡಲಲಲಿತಕಪೋಲಾ । ಮುಖರಿತರಸನಜಘನಗತಿಲೋಲಾ ॥೪॥

ಟೀ. ಚಂಚಲ-ಚಲಿಸುತ್ತಲಿರುವ, ಕುಂಡಲ- ಕರ್ಣಕುಂಡಲದಿಂದ, ಲಲಿತ-ಮನೋಹರವಾದ, ಕಪೋಲ-ಗಂಡಸ್ಥಳಗಳುಳ್ಳ, ಮುಖರಿತ- ಧ್ವನಿಮಾಡಲ್ಪಟ್ಟ, ರಸನ-ಒಡ್ಯಾಣವುಳ್ಳ, ಜಘನ- ಕಟಿಪುರೋಭಾಗದ, ಗತಿ-ಗಮನದಿಂದ, ಲೋಲಾ-ಚಂಚಲಳಾದ, ಕಾಪಿ-ವಿಹರತಿ.

ದಯಿತವಿಲೋಕಿತಲಜ್ಜಿತಹಸಿತಾ । ಬಹುವಿಧಕೂಜಿತರತಿರಸರಸಿತಾ. ॥೫॥

ಟೀ. ದಯಿತ – ನಾಯಕನಾದಕೃಷ್ಣನ, ವಿಲೋಕಿತ – ನೋಡೋಣದರಿಂದ, ಲಜ್ಜಿತ – ನಾಚಿಕೆಪಡಿಸಲ್ಪಟ್ಟ, ಹಸಿತಾ – ನಗಿಸಲ್ಪಟ್ಟ, ಬಹುವಿಧ – ಅನೇಕವಿಧವಾದ, ಕೂಜಿತ -- ರತಿಕೂಜಿತವುಳ್ಳ, ರತಿ -- ಸುರತದ, ರಸ – ಅನುರಾಗದಿಂದುಂಟಾದ, ರಸಿತಾ – ಧ್ವನಿಯುಳ್ಳ, ಕಾಪಿ -- ವಿಹರತಿ.

ವಿಪುಲಪುಲಕಪೃಥುವೇಪಥುಭಂಗಾ । ಶ್ವಸಿತನಿಮೀಲಿತವಿಕಸದನಂಗಾ ॥೬॥

ಟೀ. ವಿಪುಲ – ವಿಸ್ತಾರವಾದ, ಪುಲಕ -- ರೋಮಾಂಚವೇನು, ಪೃಥು -- ಮಹತ್ತಾದ, ವೇಪಥು -- ಕಂಪನವೇನು, ಇವುಗಳ -- ಭಂಗಾ ತರಂಗವುಳ್ಳ, ಶ್ವಸಿತ – ನಿಟ್ಟುಸುರಿಂದಲು, ನಿಮೀಲಿತ- ಕಣ್ಣುಮುಚ್ಚೋಣದರಿಂದಲು, ವಿಕಸತ್ – ಪ್ರಕಾಶಿಸುತಲಿರುವ, ಅನಂಗಾ – ಮನ್ಮಥನುಳ್ಳ, ಕಾಪಿ-ವಿಹರತಿ.

ಶ್ರಮಜಲಕಣಭರಸುಭಗಶರೀರಾ । ಪರಿಪತಿತೋರಸಿರತಿರಣಧೀರ. ॥೭॥

ಟೀ. ಶ್ರಮ-ಆಯಾಸದಿಂದುಂಟಾದ, ಜಲ – ಬೆವರಿನ, ಕಣ – ಬಿಂದುಗಳ, ಭರ – ಆಧಿಕ್ಯದಿಂದ, ಸುಭಗ — ಮನೋಹರವಾದ, ಶರೀರಾ – ಶರೀರವುಳ್ಳವಳಾಗಿ, ಉರಸಿ -- ವಕ್ಷಸ್ಥಳದಲ್ಲಿ, ಪರಿಪತಿತಾ – ಮಲಗಿರುವ, ರತಿರಣಧೀರಾ, ರತಿ-ಕ್ರೀಡೆಯೆಂಬ, ರಣ-ಯುದ್ಧದಲ್ಲಿ, ಧೀರಾ- ಧೈರ್ಯಶಾಲಿಯಾದ, ಕಾಪಿ-ಮಧು.

ಶ್ರೀಜಯದೇವಭಣಿತಹರಿಚರಿತಂ । ಕಲಿಕಲುಷಂಜನಯತುಪರಿಶಮಿತಂ ॥೮॥

ಟೀ. ಶ್ರೀಜಯದೇವ - ಜಯದೇವಕವಿಯಿಂದ, ಭಣಿತಂ- ಹೇಳಲ್ಪಟ್ಟ, ಹರಿ - ಕೃಷ್ಣನ, ಚರಿತಂ - ಚರಿತ್ರವು, ಕಲಿ - ಕಲಿಯುಗದ, ಕಲುಷಂ-ಪಾಪವನ್ನು, ಪರಿಶಮಿತಂ -- ಹೋಗಲಾಡಿಸಲ್ಪಟ್ಟದ್ದನ್ನಾಗಿ, ಜನಯತು-ಉಂಟುಮಾಡಲಿ.

ತಾ. ಒಬ್ಬಾನೊಬ್ಬ ತರುಣಿಯು ಶ್ರೀಕೃಷ್ಣನೊಡನೆ ಆಲಿಂಗನ ಚುಂಬನ ಮೊದಲಾದ ನಾನಾವಿಧ ಸುರತಚಮತ್ಕಾರಂಗಳಿಂ ವಿಹರಿಸುತ್ತಲಿದ್ದಾಳೆ.

ಶ್ಲೋ. ವಿರಹಪಾಂಡುಮುರಾರಿಮುಖಾಂಬುಜದ್ಯುತಿರಯಂತಿರಯನ್ನಪಿ ವೇದನಾಂ॥ ವಿಧುರತೀವತನೋತಿಮನೋಭುವಸ್ಸುಹೃದಯೇ ಹೃದಯೇಮದನವ್ಯಥಾಂ.

ರಾಧೆಯು ಸಖಿಯಂಕುರಿತು ಹೇಳುತ್ತಾಳೆ.

ಟೀ. ಅಯಿ - ಎಲೈಸಖಿಯೆ, ವಿರಹಪಾಂಡುಮುರಾರಿಮುಖಾಂಬುಜದ್ಯುತಿಃ, ವಿರಹ-ವಿಯೋಗದಿಂದ, ಪಾಂಡು-ಶುಭ್ರವಾದ, ಮುರಾರಿ -- ಶ್ರೀಕೃಷ್ಣನ, ಮುಖಾಂಬುಜ - ಕಮಲದಂತಿರುವ ಮುಖದ, ದ್ಯುತಿಃ - ಕಾಂತಿಯಂತಿರುವ ಕಾಂತಿಯುಳ್ಳ, ( ಆದಕಾರಣ ದ್ದೆಸೆಯಿಂದಲೆ ) ವೇದನಾಂ- ವ್ಯಥೆಯಂನು, ತಿರಯನ್ನಪಿ - ಹೋಗಲಾಡಿಸು ವಂಥಾವನಾದರು, ಮನೋಭುವಃ-ಮನ್ಮಥನಿಗೆ, ಸುಹೃತ್-ಸ್ನೇಹಿತನಾದ, ಅಯಂ -- ಈ, ವಿಧುಃ -- ಚಂದ್ರನು, ಹೃದಯೇ -- ಮನಸ್ಸಿನಲ್ಲಿ, ಮದನವ್ಯಥಾಂ -- ಮನ್ಮಥವ್ಯಥೆಯನ್ನು, ಅತೀವ -- ಅತ್ಯಂತವಾಗಿ, ತನೋತಿ -- ವಿಸ್ತರಿಸುತ್ತಲಿದ್ದಾನೆ.

ತಾ. ಎಲೈ ಸಖಿಯೆ ಈ ಚಂದ್ರನು ಕೃಷ್ಣನಮುಖದಂತಿರುವದರಿಂದ ದುಃಖವಂ ಪರಿಹರಿಸತಕ್ಕವನಾದಾಗ್ಯೂ ಮನ್ಮಥನಿಗೆ ಮಿತ್ರನಾದುದರಿಂದ ಷ್ಟನ್ನು ಅಧಿಕವಾಗಿ ಸಂತಾಪವಂ ಬಡಿಸುತ್ತಲಿದ್ದಾನೆ.

ಪಂಚದಶಾಷ್ಟಪದೀಪ್ರಾರಂಭಃ, ರಾಗ-ಘೂರ್ಜರಿ.

ಸಮುದಿತಮದನೇರಮಣೀವದನೇಚುಂಬನಲಲಿತಾಧರೇ॥ ವಿಲಿಖತಿತಿಲಕಂಪ್ರ
ಲಸದಲಕಂಮೃಗವಿಮರಜನೀಕರೇ ॥೧॥ ಪ ॥ ರಮತೇಯಮುನಾಪುಲಿನ
ವನೇವಿಜಯೀಮುರಾರಿರಧುನಾರಮತೇಯಮುನಾಪುಲಿನವನೇ.

ರಾಧೆಯುಸಖಿಯಂಕುರಿತು ಹೇಳುತ್ತಾಳೆ.

ಟೀ. ಎಲೈ ಸಖಿಯೆ, ವಿಜಯೀ - ಜಯಶೀಲನಾದ, ಮುರಾರಿಃ -- ಕೃಷ್ಣನು, ಯಮುನಾಪುಲಿನವನೇ, ಯಮುನಾ-ಕಾಳಿಂದೀನದಿಯ, ಪುಳಿನ-

ಮುರಳಿನ. ವನೆ - ವನದಲ್ಲಿ, ಅಧುನಾ - ಈವಾಗ, ರಮತೆ - ಕ್ರೀಡಿಸುತ್ತ ಲಿಧಾನೆ, ಸಮುದಿತಮದನೆ, ಸಮುದಿತ - ಹುಟ್ಟಿಸಲ್ಪಟ್ಟ, ಮದನೆ- ಮನ್ಮಥನುಳ್ಳ, ಚುಂಬನಲಲಿತಾಧರೆ, ಚುಂಬನ - ಮುತ್ತಿಕ್ಕೊಳ್ಳೋಣದರಿಂದ, ಲಲಿತ - ಮನೋಹರವಾದ, ಅಧರೆ - ತುಟಿಯುಳ್ಳ, ರಮಣೀವದನೆ, - ಸ್ತ್ರೀಯು, ವದನೆ - ಮುಖದಲ್ಲಿ, ಪ್ರವಿಲಸದಲಕಂ, ಪ್ರವಿಲಸತ್ - ಪ್ರಕಾಶಿಸುತ್ತಲಿರುವ, ಅಲಕಂ - ಮುಂಗುರುಳುಳ್ಳ, ತಿಲಕಂ -- ಕಸ್ತೂರಿಬೊಟ್ಟನ್ನು, ರಜನೀಕರೆ - ಚಂದ್ರನಲ್ಲಿ, ಮೃಗಮಿವ -ಮೃಗವನ್ನೋಪಾದಿಯಲ್ಲಿ, ವಿಲಿಖತಿ - ಬರಯುತ್ತಲಿಧಾನೆ.

ಘನಚಯರುಚಿರೆರಚಯತಿಚಿಕುರೆತರಳಿತತರುಣಾನನೆ॥ಕುರವಕಕುಸು
ಮಂಚಪಲಾಸುಷಮಂರತಿಪತಿಮೃಗಕಾನನೆ ॥೨॥ ರಮತೆ

ಟೀ. ಮುರಾರಿಃ - ಕೃಷ್ಣನು, ಘನಚಯರುಚಿರೆ, ಘನ -- ಮೇಘಗಳ, ಚಯ - ಸಮೂಹದಂತೆ, ರುಚಿರೆ -- ಮನೋಹರವಾದ, ತರಳಿತತರುಣಾನನೆ, ತರಳಿತ - ಚಲಿಸಿಸಲ್ಪಟ್ಟ, ತರುಣಾ - ಯೌವನಯುಕ್ತವಾದ, ಆನನೆ - ಮುಖವುಳ್ಳ, ರತಿಪತಿಮೃಗಕಾನನೆ, ರತಿಪತಿ -- ಮನ್ಮಥನೆಂಬ, ಮೃಗ- ಜಿಂಕೆಗೆ, ಕಾನನ - ಕ್ರೀಡಾವನವಾದ, ಚಿಕುರೆ - ಕೇಶಕಲಾಪದಲ್ಲಿ ಚಪಲಾಸುಷಮಂ, ಚಪಲ - ಮಿಂಚಿನ, ಸುಷಮಂ -- ಕಾಂತಿಯಂತಿರುವಕಾಂತಿಯುಳ್ಳ, ಕುರವಕಕುಸುಮಂ, ಕುರವಕ - ಗೋರಂಟೆಯ, ಕುಸುಮಂ -- ಹೂವನ್ನು, ರಚಯತಿ -- ಅಲಂಕರಿಸುತ್ತಲಿಧಾನೆ.

ಘಟಯತಿಸುಘನೆಕುಚಯುಗಗಗನೆಮೃಗಮದರುಚಿರೂಷಿತೆ । ಮಣಿಸ
ರಮಮಲಂ ತಾರಕಪಟಲಂನಖಪದಶಶಿಭೂಷಿತೆ ॥೩॥ ರಮತೆ ಯಮುನಾ

ಟೀ. ಸುಘನೆ, ಸು- ಶೋಭನವಾಗಿ, ಘನೆ - ಸೇರಿಕೊಂಡಿರುವ ಸು-ಶೋಭನವಾದ, ಘನೆ-ಮೇಘವುಳ್ಳ, ಮೃಗಮದರುಚಿರೂಷಿತೆ, ಮೃಗಮದ-ಕಸ್ತೂರಿಯು, ರುಚಿ - ಕಾಂತಿಯಿಂದ, ರೂಷಿತೆ - ವ್ಯಾಪ್ತವಾದ ಮೃಗಮದ-ಕಸ್ತೂರಿಯಂತಿರುವ, ರುಚಿ-ಕಾಂತಿಯಿಂದ, ರೂಷಿತೆ- ಕೂಡಿರುವ, ನಖಪದಶಶಿಭೂಷಿತೆ, ನಖಪದ-ನಖಕ್ಷತವೆಂಬ, ಶಶಿ -- ಚಂದನಿಂದ, ಭೂಷಿತೆ -- ಅಲಂಕರಿಸಲ್ಪಟ್ಟ ನಖಕ್ಷತದಂತಿರುವ ಚಂದ್ರನಿಂ ಅಲಂಕರಿಸಲ್ಪಟ್ಟ, ಕುಚಯುಗಗಗನೆ, ಕುಚಯುಗ -ಸ್ತನಯುಗಗಳೆಂಬ ಗಗನೆ- ಆಕಾಶದಲ್ಲಿ, ಅಮಲಂ- ನಿರ್ಮಲವಾದ, ಮಣಿಸರಂ -- ಮುತ್ತುಗಳ ಹಾರವೆಂಬ, ತಾರಕಪಟಲಂ -- ನಕ್ಷತ್ರಸಮೂಹವನ್ನು, ಘಟಯ

ತಿ-ಶೇರಿಸುತಲಿಧಾನೆ.

ಜಿತಬಿಸಶಕಲೆಮೃದುಭುಜಯುಗಳೆಕರತಲನಳಿನೀದಳೆ | ಮರಕತವಲಯಂಮಧುಕರನಿಚಯಂವಿತರತಿಹಿಮಶೀತಳೆ ||೪|| ರಮತೆಯಮುನಾ.

ಟೀ. ಜಿತಬಿಸಶಕಲೆ, ಜಿತ-- ಜೈಸಲ್ಪಟ್ಟ, ಬಿಸ-- ತಾವರೆದಂಟಿನ ಶಕಲೆ-- ಖಂಡವುಳ್ಳ, ಕರತಲನಳಿನೀದಳೆ, ಕರತಳ -- ಅಂಗೈಯೆಂಬ, ನಳಿನೀದಳೆ--ತಾವರೆಯಎಲೆಯುಳ್ಳ, ಹಿಮಶೀತಳೆ, ಹಿಮ-- ಮಂಜಿನಂತೆ, ಶೀತಳೆ--ತಂಣಗಿರುವ, ಮೃದು ಭುಜಯುಗಳೆ, ಮೃದು--ಕೋಮಳವಾದ, ಭುಜ-- ತೋಳುಗಳ, ಯುಗಳೆ-- ಯೆರಡರಲ್ಲಿ ಮರಕತವಲಯಂ, ಮರಕತ --- ಇಂದ್ರನೀಲಮಣಿಯ, ವಲಯಂ ---ಕಂಕಣವೆಂಬ, ಮಧುಕರ---ತುಂಬಿಗಳ, ನಿಚಯಂ--- ಸಮೂಹವನ್ನು, ವಿತರತಿ--- ವಿಸ್ತರಿಸುತ್ತಲಿಧಾನೆ.

ರತಿಗೃಹಜಘನೆವಿಪುಲಾಪಘನೆಮನಸಿಜಕನಕಾಸನೆ | ಮಣಿಸದರಶನಾಂತೋರಣಹಸನಾಂವಿಕಿರತಿಕೃತವಾಸನೆ ||೫|| ರಮತೆ.

ಟೀ. ಮುರಾರಿಃ--ಕೃಷ್ಣನು, ವಿಪುಲಾಪಘನೆ, ವಿಪುಲ-- ವಿಸ್ತಾರವಾದ, ಅಪಘನೆ--ಆಕೃತಿಯುಳ್ಳ, ಮನಸಿಜಕನಕಾಸನೆ, ಮನಸಿಜ--ಮನ್ಮಥನಿಗೆ, ಕನಕಾಸನೆ-- ಸುವರ್ಣಪೀಠವಾದ, ಕೃತವಾಸನೆ, ಕೃತ-ಮಾಡಲ್ಪಟ್ಟ, ವಾಸನೆ--ಪರಿಮಳವುಳ್ಳ, ರತಿಗೃಹಜಘನೆ, ರತಿ--ರತಿದೇವಿಗೆ, ಗೃಹ-ಮನೆಯಾದ, ಜಘನೆ- ಕಟಿಪ್ರದೇಶಭಾಗದಲ್ಲಿ, ತೋರಣಹಸನಾಂ, ತೋರಣ--ತೋರಣವನ್ನು, ಹಸನಾಂ--ಹಾಸ್ಯಮಾಡುತ್ತಲಿರುವ, ಮಣಿಮಯರಶನಾಂ, ಮಣಿಮಯ--ರತ್ನಮಯವಾದ, ರಶನಾಂ--ಒಡ್ಯಾಣವನ್ನು, ವಿತರತಿ--ಅಲಂಕರಿಸುತಲಿಧಾನೆ.

ಚರಣಕಿಸಲಯೆಕಮಲಾನಿಲಯೆನಖಮಣಿಗಣಭೂಷಿತೆ | ಬಹಿರಪವರಣಂಯಾವಕಭರಣಂಜನಯತಿಹೃದಿಯೋಜಿತೆ||೬||ರಮತೆಯಮುನಾ.

ಟೀ. ಮುರಾರಿಃ--ಕೃಷ್ಣನು, ನಖಮಣಿಗಣಭೂಷಿತೆ, ನಖ--ಉಗುರುಗಳೆಂಬ, ಮಣಿ-- ರತ್ನಗಳ, ಗಣ -- ಸಮೂಹದಿಂದ, ಭೂಷಿತೆ--ಅಲಂಕರಿಸಲ್ಪಟ್ಟ, ಕಮಲಾನಿಲಯೆ, ಕಮಲಾ --- ಲಕ್ಷ್ಮಿಗೆ, ನಿಲಯೆ ಗೃಹವಾದ, ಹೃದಿ-ವಕ್ಷಸ್ಥಲದಲ್ಲಿ, ಯೋಜಿತೆ -- ಶೇರಿಸಲ್ಪಟ್ಟ, ಚರಣಕಿಸಲಯೆ ---- ಚಿಗರಿನಂತಿರುವಪಾದದಲ್ಲಿ, ಬಹಿರಪವರಣಂ, ಬಹಿಃ --- ಹೊರಗೆ ಅಪವರಣಂ---ಆಛ್ಛಾದನ ವಾದ---ಯಾವಕಭರಣಂ, ಯಾವಕ -- ಅರಶಿಣಗೆಯೆಂಬ, ಆಭರಣಂ -- ಅಲಂಕಾರವನ್ನು, ಜನಯತಿ--

ಉಂಟುಮಾಡುತ್ತಲಿದ್ದಾನೆ.

ಧ್ಯಾಯತಿಸದೃಶಂತಾವಮಪಿಸುದೃಶಂಖಲುಹಲಧರಸೋದರೇ| ಕಿಮಫಲಮವಸಂಚಿರಮಿಹವಿರಸಂವದಸಖಿವಿಟಪೋದರೇ॥೬॥ ರಮತೆಯಮುನಾ.

ಟೀ. ಹಲಧರಸೋದರೇ -- ಶ್ರೀಕೃಷ್ಣನು, ತಾವಮಪಿ -- ಬಹಳ್ವನೊಬ್ಬ, ಸುದೃಶಂ--ಸ್ತ್ರೀಯನ್ನು, ಸದೃಶಂ--ಸಮಾನವಾಗಿರೋಣ ಹಾಗೋಹಾಗೆ, ಧ್ಯಾಯತಿಸತಿ-- ಧ್ಯಾನಮಾಡುತ್ತಿರಲಾಗಿ, ಇಹವಿಟಪೋದರೇ-- ಈ ಲತಾಗೃಹದಲ್ಲಿ, ಅವಶಂ-ಸ್ವಾಧೀನನಲ್ಲದ, ವಿರಸಂ -- ಅನುರಾಗರಹಿತನಾದ ಕೃಷ್ಣನಂ ಕುರಿತು, ಅಫಲಂ--ವ್ಯರ್ಥವಾಗಿ, ಚಿರಂ -- ಸಾವಕಾಶವು, ಕಿಂಖಲು--ಯೇನು, ಹೇಸಖೀ--ಎಲೈಸಖಿಯೇ, ವದ-ಹೇಳು.

ಇಹರಸಭಣಿತೇಕೃತಹರಿಗುಣಾನೆಮಧುರಿಪುಪದಸೇವಕೆ| ಕಲಿಯುಗಚರಿತಂನವಸತುದುರಿತಂಕವಿನೃಪಜಯದೇವಕೆ॥೮॥ರಮತೆಯಮುನಾಪುಳಿನವನೆ. ಟೀ. ರಸಭಣಿತೇ, ರಸ--ಶೃಂಗಾರಾದಿರಸಯುಕ್ತವಾದ, ಭಣಿತೇ--ವಾಕ್ಯಗಳ್ಳ, ಇಹ--- ಈ ಗೀತೆಯಲ್ಲಿ, ಕೃತಹರಿಗುಣಿತೆ, ಕೃತ --- ಮಾಡಲ್ಪಟ್ಟ, ಹರಿ -- ಶ್ರೀಕೃಷ್ಣನ, ಗುಣಾನೆ--ಕೀರ್ತನೆಯುಳ್ಳ, ಮಧುರಿಪುಪದಸೇವಕೆ, ಮಧುರಿಪು--ಕೃಷ್ಣನ, ಪದ--ಪಾದದ, ಸೇವಕೆ-ಸೇವಕನಾದ ಕವಿನೃಪಜಯದೇವಕೆ, ಕವಿನೃಪ -- ಕವಿಸಾರ್ವಭೌಮನಾದ, ಜಯದೇವಕೆ--ಜಯದೇವಕನಲ್ಲಿ, ಕಲಿಯುಗಚರಿತಂ, ಕಲಿಯುಗ-- ಕಲಿಯುಗದಲ್ಲಿ, ಚರಿತಂ-- ಮಾಡಲ್ಪಟ್ಟ, ದುರಿತಂ---ಪಾಪವು, ನವಸತು---ನಾಸವಾಗಬೇಡ.

ಶ್ಲೋ ॥ ನಾಯಾತಸ್ಸಖಿನಿರ್ದಯೋಯದಿಶಠಸ್ತ್ವಂದೂತಿಕಿಂದೂಯಸೆಸ್ವಚ್ಛಂದಂಬಹುವಲ್ಲಭಸ್ಸರಮತೆಕಿಂತತ್ರತೆದೂಷಣಂ॥ಪಶ್ಯಾದ್ಯಪ್ರಿಯಸಂಗಮಾಯದಯಿತಸ್ಯಾಕೃಷ್ಯಮಾಣಂಗುಣೈಃ ಉತ್ಕಂಠಾರ್ತಿ ಭರಾದಿವಸ್ಫುಟದಿದಂಚೆತಸ್ಸ್ವಯಂಯಾಸ್ಯತಿ.

ಟೀ. ಸಖಿ--ಕೆಳದಿಯಾದ, ಹೇದೂತಿ--ಎಲೈದೂತಿಯೆ, ನಿರ್ದಯಃ--ಕರುಣಾರಹಿತನಾದ, ಶಠಃ-- ಧೂರ್ತನಾದ ಶ್ರೀಕೃಷ್ಣನು, ನಾಯಾತೋಯದಿ--ಬರದೆಇದ್ದೇನೆ ಅದರೆ, ತ್ವಂ--ನೀನು, ಕಿಂದೂಯಸೆ--ಯಾತಕ್ಕೋಸ್ಕರ ದುಃಖಪಡುತ್ತೀಯೆ, ಸಃ--ಆ ಕೃಷ್ಣನು, ಸ್ವಚ್ಛಂದಂ-ಯಥೇಚ್ಛವಾಗಿ, ಬಹುವಲ್ಲಭಃ, ಬಹು --- ಬಹಳವಾದ, ವಲ್ಲಭಃ -- ಪ್ರಾಣಕಾಂತೆಯರುಳ್ಳವನಾಗಿ, ರಮತೆ--- ಕ್ರೀಡಿಸುತ್ತಲಿದ್ದಾನೆ, ತತ್ರ---ಆ ವಿಷಯದಲ್ಲಿ ತೆ-ನಿನ್ನ, ದೂಷಣಂ-ದೋಷವು, ಕಿಂ-ಯೇನು, ಅದ್ಯ-ಈಸಾಗ, ಇದಂ

ಚೇತಃ - ಈ ಮನಸ್ಸು, ದಯಿತಸ್ಯ - ಕಾಂತನಾದಕೃಷ್ಣನ, ಗುಣೈಃ -
ಗುಣಗಳಿಂದ, ಆಕೃಷ್ಯಮಾಣಂಸತ್-ಸೆಳೆಯಲ್ಪಟ್ಟದ್ದಾಗಿ, ಉತ್ಕಂಠಾರ್ತಿ
ಭರಾದಿವ, ಉತ್ಕಂಠ--ಸುರತಾಸಕ್ತಿಯೇನು, ಆರ್ತಿ--ವ್ಯಥೆಯೇನು ಇ
ವುಗಳ, ಭರಾದಿವ--ಅತಿಶಯದ್ದೆಸೆಯಿಂದಲೋಯೆಂಬಹಾಗೆ, ಪ್ರಿಯಸಂ
ಗಮಾಯ, ಪ್ರಿಯ -- ಕಾಂತನ, ಸಂಗಮಾಯ -- ಸಂಬಂಧಕ್ಕೋಸ್ಕರ,
ಸ್ಫುಟಂ--ವ್ಯಕ್ತವಾಗಿ, ಸ್ವಯಂ-ತಾನೆ, ಯಾಸ್ಯತಿ--ಹೋಗುವದು, ಪ
ಶ್ಯ--ನೋಡು. ತಾ. ಎಲೈ ದೂತಿಯೆ ಶ್ರೀಕೃಷ್ಣನು ಅವನವಿರಹ
ದಿಂದಲೆ ಹಂಬಲಿಸುತಲಿರುವನನ್ನೊಳು ಕರುಣೆಯಿಲ್ಲದೆ ಅನೇಕಗೋಪಿಯ
ರೊಡಗೂಡಿ ಕ್ರೀಡಿಸುತ್ತಲಿರುವನಾಗಿ ಬಾರದೆಯಿದ್ದಲ್ಲಿ ನಿನ್ನ ದೋಷವೇ
ನು ಅವನಸೌಂದರ್ಯಾದಿ ಸದ್ಗುಣಂಗಳಿಂ ಸೆಳೆಯಲ್ಪಟ್ಟ ನನ್ನ ಮನಸ್ಸು ತಾ
ನೆ ಅವನ ಬಳಿಯಂ ಕುರಿತು ಪೊರಮಡುವದು.

ಷೋಡಶಾಷ್ಟಪದೀ ಪ್ರಾರಂಭಃ. ರಾಗ. ವರಾಳಿ.

ಪ|| ಅನಿಲತರಳಕುವಲಯನಯನೇನ|ಪತತಿನಸಾಕಿಸಲಯಶಯನೇನ |
ಯಾರಮಿತಾವನಮಾಲಿನಾ ಸಖಿ ಯಾರಮಿತಾವನಮಾಲಿನಾ.

ಟೀ. ಹೇಸಖಿ--ಎಲೈಕೆಳದಿಯೆ, ಅನಿಲ--ಘಾಳಿಯಿಂದ, ತರಳ--
ಚಂಚಲವಾದ, ಕುವಲಯ -- ನೈದಲೆಯುಲರಂತಿರುವ, ನಯನೇನ -- ಕ
ಣ್ಣುಳ್ಳ, ವನಮಾಲಿನಾ-- ಶ್ರೀಕೃಷ್ಣನಿಂದ, ಯಾ-- ಯಾವತರುಣಿಯು,
ರಮಿತಾ-- ಕ್ರೀಡಿಸಲ್ಪಟ್ಟಳೊ, ಸಾ--ಆಸ್ತ್ರೀಯು, ಕಿಸಲಯಶಯನೇನ,
ಕಿಸಲಯ --- ತಳಿರ್ಗಳ, ಶಯನೇನ---ಹಾಸಿಕೆಯಿಂದ, ನಪತತಿ--- ಬೀ
ಳುವದಿಲ್ಲ.

ವಿಕಸಿತಸರಸಿಜಲಲಿತಮುಖೇನ|ಸ್ಫುಟತಿನಸಾಮನಸಿಜವಿಶಿಖೇನ||೨|| ಯಾ:

ಟೀ. ವಿಕಸಿತ--ಅರಳಿರುವ, ಸರಸಿಜ-- ಕಮಲದಂತೆ, ಲಲಿತ -- ಮ
ನೋಹರವಾದ, ಮುಖೇನ-ಮೊಗವುಳ್ಳ, ವನಮಾಲಿನಾ - ಶ್ರೀಕೃಷ್ಣನಿಂ
ದ,ಯಾ-ಯಾವಸ್ತ್ರೀಯು,ರಮಿತಾ-ಕ್ರೀಡಿಸಲ್ಪಟ್ಟಳೋ,ಸಾ-ಆಸ್ತ್ರೀಯು,
ಮದನವಿಶಿಖೇನ, ಮದನ--ಮನ್ಮಥನ, ವಿಶಿಖೇನ--ಬಾಣದಿಂದ, ನಸ್ಫುಟತಿ-
ಸೀಳುವದಿಲ್ಲ.

ಅಮೃತಮಧುರಮೃದುವರವಚನೇನ|ಜ್ವಲತಿನಸಾಮಲಯಜರಚನೇನ.

ಟೀ. ಅಮೃತ-- ಅಮೃತದಂತೆ, ಮಧುರ--ಸವಿಗೂಡಿದ, ಮೃ
ದು--ಕೋಮಲವಾದ, ವರ -- ಶ್ರೇಷ್ಠವಾದ, ವಚನೇನ -- ವಾಕ್ಯಗ
ಳುಳ್ಳ ವನಮಾಲಿನಾ -- ಶ್ರೀಕೃಷ್ಣನಿಂದ, ಯಾ --- ಯಾವಸ್ತ್ರೀಯು

ರಮಿತ -- ರಮಿಸಲ್ಪಟ್ಟಳೋ, ಸಾ--ಆಸ್ತ್ರೀಯು, ಮಲಯಜರಜರಚನೇನ, ಮಲಯಜ--ಚಂದನದ, ರಚನೇನ_ಲೇಪನದಿಂದ, ನಜ್ವಲತಿ -- ಸಂತಾಪಪಡುವದಿಲ್ಲ.

ಸ್ಥಲಜಲರುಹರುಚಿಕರಚರಣೇನ|ಲುಠತಿನಸಾಹಿಮಕರಕಿರಣೇನ||೪|| ಯಾ.

ಟೀ. ಸ್ಥಲಜಲರುಹ--ನೆಲದಾವರೆಯ, ರುಚಿ_ಕಾಂತಿಯಂತೆಕಾಂತಿಯುಳ್ಳ, ಕರ-ಹಸ್ತಗಳೇನು, ಚರಣ-ಪಾದಗಳೇನು, ಇವುಗಳುಳ್ಳ ಶ್ರೀಕೃಷ್ಣನಿಂದ, ಯಾ--ಯಾವಸ್ತ್ರೀಯು, ರಮಿತ-ರಮಿಸಲ್ಪಟ್ಟಳೋ, ಸಾ-ಆಸ್ತ್ರೀಯು, ಹಿಮಕರಕಿರಣೇನ--ಚಂದ್ರಕಿರಣದಿಂದ, ನಲುಠತಿ - ಹೊರಳಾಡುವದಿಲ್ಲ.

ಸಜಲಜಲದಸಮುದಯರುಚಿರೇಣ|ದಳತಿನಸಾಹೃದಿವಿರಸಭರೇಣಯಾರಮಿತಾ

ಟೀ. ಸಜಲಜಲದ-ಮುಂಗಾರುಮೇಘದ, ಸಮುದಯ-ಆವಿರ್ಭಾವದಂತೆ ರುಚಿರೇಣ-ಮನೋಹರನಾದ ಶ್ರೀಕೃಷ್ಣನಿಂದ, ಯಾ-ಯಾವಸ್ತ್ರೀಯು, ರಮಿತಾ-ರಮಿಸಲ್ಪಟ್ಟಳೂ, ಸಾ-ಆಸ್ತ್ರೀಯು, ವಿರಹಭರೇಣ - ವಿರಹಾಧಿಕ್ಯದಿಂದ, ಹೃದಿ-ಮನಸ್ಸಿನಲ್ಲಿ, ನದಳತಿ-ಶೀಳುವದಿಲ್ಲ.

ಕನಕನಿಚಯರುಚಿಶುಚಿವಸನೇನ|ಶ್ವಸಿತಿನಸಾಪರಿಜನಹಸನೇನ|ಯಾರ.

ಟೀ. ಕನಕ--ಸುವರ್ಣದ, ನಿಚಯ--ಸಮೂಹದ, ರುಚಿ--ಕಾಂತಿಯಂತೆ ಕಾಂತಿಯುಳ್ಳ, ಶುಚಿ-ಪರಿಶುದ್ಧವಾದ, ವಸನೇನ-ವಸ್ತ್ರಮುಳ್ಳ, ವನಮಾಲಿನಾ-ಶ್ರೀಕೃಷ್ಣನಿಂದ, ಯಾ-ಯಾವಸ್ತ್ರೀಯು, ರಮಿತಾ-ಕ್ರೀಡಿಸಲ್ಪಟ್ಟಳೂ, ಸಾ-ಆಸ್ತ್ರೀಯು, ಪರಿಜನಹಸನೇನ, ಪರಿಜನ_ಸಖೀಜನಗಳ, ಹಸನೇನ-ಹಾಸ್ಯದಿಂದ, ನಶ್ವಸಿತಿ-ನಿಟ್ಟುಸುರಂಬಿಡುವದಿಲ್ಲ. -

ಸಕಲಭುವನಜನವರತರುಣೇನ|ವಹತಿನಸಾರುಚಿಮತಿಕರುಣೇನ||ಯಾರಮಿ

ಟೀ. ಸಕಲಭುವನ-ಸಕಲಜಗತ್ತಿನ, ಜನ-ಜನಗಳಮಧ್ಯದಲ್ಲಿ, ವರ-ಶ್ರೇಷ್ಠನಾದ, ತರುಣೇನ-ಯೌವನಸ್ತನಾದ, ವನಮಾಲಿನಾ-ಶ್ರೀಕೃಷ್ಣನಿಂದಾ, ಯಾ-ಯಾವಸ್ತ್ರೀಯು, ರಮಿತ-ಕ್ರೀಡಿಸಲ್ಪಟ್ಟಳೂ, ಸಾ-ಆಸ್ತ್ರೀಯು, ಅತಿಕರುಣೇನ-ಅತ್ಯಂತದೈನ್ಯದಿಂದ, ರುಜಂ-ಸಂತಾಪವನ್ನು, ನವಹತಿ-ವಹಿಸುವದಿಲ್ಲ.

ಶ್ರೀಜಯದೇವಭಣಿತಮನೇನಪ್ರವಿಶತುಹರಿರಪಿಹೃದಯಮನೇನ||ಯಾ.

ಟೀ. ಅನೇನ--ಈ ಶ್ರೀಜಯದೇವ, ಭಣಿತಮನೇನ, ಶ್ರೀಜಯದೇವ -- ಶ್ರೀಜಯದೇವಕವಿಯ, ಭಣಿತ-- ವಾಕ್ಯದ, ಮನನೇನ-- ಅಭ್ಯಾಸದಿಂದ, ಹರಿರಪಿ-- ಶ್ರೀಕೃಷ್ಣಸ್ವಾಮಿಯೂಕೂಡ, ಹೃದಯಂ---ಮನ

ಸ್ಸನ್ನ,ಪ್ರನಿಕಟ ಪ್ರವೇಶಿಸಲಿ. ತಾ. ಎಲೈ ಸಖಿಯೆ ಸೌಂದರ್ಯ ಸೌಶೀಲ್ಯಾದಿ ಸಮಸ್ತ ಗುಣ ಸಂಪನ್ನನಾದ ಶ್ರೀಕೃಷ್ಣ ನೊಡಗೂಡಿ ಕ್ರೀಡಿಸುತ್ತಲಿರುವ ತರುಣಿಯು ನನ್ನಂತೆ ಯಾವದೊಂದು ವಿರಹವಿಕಾರವಂ ಪೊಂದುವದಿಲ್ಲ

ಶ್ಲೋ. ಮನೋಭವಾನಂದನ ಚಂದನಾನಿಲಪ್ರಸೀದಹೆದಕ್ಷಿಣ ಮುಂಚ ವಾಮತಾಂ ॥ ಕ್ಷಣಂಜಗತ್ಪ್ರಾಣನಿಧಾಯಮಾಧವಂಪುರೋಮಮಪ್ರಾಣಹರೋಭವಿಷ್ಯಸಿ॥

ಟೀ. ಮನೋಭವಾನಂದನ, ಮನೋಭವ–ಮನ್ಮಥನನ್ನು, ಆನಂದನ–ಸಂತೋಷಪಡಿಸುವ, ದಕ್ಷಿಣ– ದಕ್ಷಿಣದಿಕ್ಕಿನಲ್ಲಿ ಹುಟ್ಟಿದಂಥಾ, ಸರಳನಾದ–ಹೆಚಂದನಾನಿಲ– ಎಲೈ ಮಲಯಮಾರುತನೆ, ಪ್ರಸೀದ – ಪ್ರಸನ್ನನಾಗು, ವಾಮತಾಂ – ವಕ್ರತ್ವವನ್ನು, ಮುಂಚ –– ಬಿಡು, ಹೇಜಗತ್ಪ್ರಾಣ– ಲೋಕಗಳಿಗೆ ಪ್ರಾಣಭೂತನಾದ ಎಲೈ ಮಾರುತನೆ, ಮಾಧವಂ – ಶ್ರೀಕೃಷ್ಣನನ್ನು, ಕ್ಷಣಂ –– ಕ್ಷಣಕಾಲಪರ್ಯಂತರವೂ, ಮಮ – ನನ್ನ, ಪುರಃ – ಮುಂದೆ, ನಿಧಾಯ–ನಿಲ್ಲಿಸಿ, ಪ್ರಾಣಹರಃ, ಪ್ರಾಣ – ಪ್ರಾಣಗಳನ್ನು, ಹರಃ– ಅಪಹರಿಸುವಂಥಾವನಾಗಿ, ಭವಿಷ್ಯಸಿ – ಆಗುತಲಿಧೀಯೆ.

ತಾ. ಎಲೈ ಮಂದಮಾರುತನೆ ಕೌಟಿಲ್ಯವಂಬಿಟ್ಟು ನನ್ನೊಳುಂದಯಮುಳ್ಳವನಾಗಿ ಶ್ರೀಕೃಷ್ಣನಂ ಕ್ಷಣಮಾತ್ರವಾದರೂ ನನ್ನ ಮುಂದನಿಲ್ಲಿಸಿ ಅನಂತರದೋಳ್ ನನ್ನ ಪ್ರಾಣಾಪಹಾರಮಂ ಮಾಡು.

ಶ್ಲೋ. ಬಾಧಾಂವಿಧೆಹಿಮಲಯಾನಿಲಪಂಚಬಾಣಪ್ರಾಣಾನ್ ಗೃಹಾಣನಪುನರ್ಗೃಹಮಾಶ್ರಯಿಷ್ಯೇ॥ ಕಿಂತೆಕೃತಾಂತಭಗಿನೀಕ್ಷಮಯಾತರಂಗೈರಂಗಾನಿಸಿಂಚಮಮಶಾಮ್ಯತುದೇಹದಾಹಃ॥

ಟೀ. ಹೆಮಲಯಾನಿಲ– ಎಲೈ ಮಲಯಮಾರುತನೆ, ಬಾಧಾಂ– ವ್ಯಥೆಯನ್ನು, ವಿಧೆಹಿ–ಮಾಡು, ಹೆಪಂಚಬಾಣ – ಎಲೈ ಮನ್ಮಥನೆ, ಪ್ರಾಣಾನ್–ಪ್ರಾಣಗಳನ್ನು, ಗೃಹಾಣ–ಗ್ರಹಿಸು, ಪುನಃ– ಮತ್ತು, ಗೃಹಂ–ಮನೆಯನ್ನು, ನಾಶ್ರಯಿಷ್ಯೇ–ಹೊಂದುವದಿಲ್ಲ, ಹೇಕೃತಾಂತಭಗಿನೀ– ಎಲೈ ಕಾಳಿಂದೀನದಿಯೇ, ತೆ–ನಿನ್ನ, ಕ್ಷಮಯಾ–ಶಾಂತಿಗುಣದಿಂದ, ಕಿಂ– ಯೇನುಪ್ರಯೋಜನ, ತರಂಗೈಃ–ತೆರೆಗಳಿಂದ, ಮಮ–ನನ್ನ, ಅಂಗಾನಿ – ಅವಯವಗಳನ್ನು, ಸಿಂಚ–ಸೇಚನೆಮಾಡು; ದೇಹದಾಹಃ– ಶರೀರಸಂತಾಪವು, ಶಾಮ್ಯತು–ಶಾಂತಿಯುಂಪೊಂದಲಿ.

ತಾ. ಎಲೈ ಕಾಳಿಂದಿಯೆ ಈ ಮದನ ಮಂದಮಾರುತಗಳಿಂ

ದುಂಟಾದ ನನ್ನ ಸಂತಾಪವಂ ನೀನಾದರೂ ತೆರಗಳತುಂತುರುಗಳಿಂ ಶಾಂತಿಗೊಳಿಸು.

ಇತಿ ಶ್ರೀಗೀತಗೋವಿಂದಮಹಾಕಾವ್ಯೇ ಸಪ್ತಮಸ್ಸರ್ಗಃ.

ಶ್ಲೋ. ಶ್ರೀ॥ ಅಥಕಥಮಪಿಯಾಮಿನೀಂವಿನೀಯಸ್ಮರಶರಜರ್ಝರಿತಾಪಿಸಾಪ್ರಭಾತೇ॥ ಅನುನಯವಿನಯಂವದಂತಮಗ್ರೇಪ್ರಣತಮಪಿಪ್ರಿಯಮಾಹಸಾಭ್ಯಸೂಯಂ॥

ಟೀ. ಅಥ-ಅನಂತರದಲ್ಲಿ, ಸಾ - ಆರಾಧೆಯು, ಕಥಮಪಿ-ಅತಿಪ್ರಯಾಸದಿಂದ, ಯಾಮಿನೀಂ - ರಾತ್ರಿಯನ್ನು, ವಿನೀಯ- ಕಳದು, ಪ್ರಭಾತೇ- ಪ್ರಾತಃಕಾಲದಲ್ಲಿ, ಸ್ಮರಶರಜರ್ಝರಿತಾಪಿ, ಸ್ಮರ-ಮನ್ಮಥನ, ಶರ-ಬಾಣದಿಂ, ಜರ್ಝರಿತಾಪಿ-ಶಿಥಿಲಳಾಗಿ ಮಾಡಲ್ಪಟ್ಟವಳಾದಾಗ್ಯೂ, ಅನುನಯವಿನಯಂ, ಅನುನಯ - ಸಮಾಧಾನೋಕ್ತಿಗಳಿಂ, ವಿನಯಂಯಥಾತಥಾ- ವಿನಯವಾಗಿರೂಣ ಹ್ಯಾಗೊಹಾಗೆ, ವದಂತಂ - ನುಡಿಯುತಲಿರುವ, ಅಗ್ರೇ - ಮುಂಭಾಗದೋಳ್, ಪ್ರಣತಮಪಿ -- ನಮ್ರನಾದಾಗ್ಯೂ, ಪ್ರಿಯಂ-ನಾಯಕನನ್ನು, ಸಾಭ್ಯಸೂಯಂ-ಅಸೂಯೆ ಯೊಡಗೂಡಿರೋಣ ಹ್ಯಾಗೊಹಾಗೆ, ಆಹ-ಪೇಳಿದಳು.

ತಾ. ಅನಂತರದೊಳಾರಾಧೆಯು ಅತಿಪ್ರಯಾಸದಿಂದಾ ರಾತ್ರಿಯಂ ಕಳದು ಮನ್ಮಥನಿಂ ಪೀಡಿಸಲ್ಪಟ್ಟವಳಾದಾಗ್ಯೂ ಪ್ರಾತಃಕಾಲದೊಳು ವಿನಯೋಕ್ತಿಯಂ ಹೇಳುತ ನಮಸ್ಕಾರವಂ ಮಾಡುತಲಿರುವ ಶ್ರೀಕೃಷ್ಣನಂ ಕುರಿತು ತಂನಂ ಬಿಟ್ಟು ಅನ್ಯಕಾಂತೆಯರೊಡನೆ ಕ್ರೀಡಿಶಿದ್ದರಿಂ ದುಂಟಾದ ಕೋಪದಿಂದೊಂದಾನೊಂದು ನುಡಿಯನ್ನಾಡಿದಳು.

ಅಥಸಪ್ತದಶಾಷ್ಟಪದೀ ಪ್ರಾರಂಭಃ, ರಾಗ--ಭೈರವಿ.

ರಜನಿಜನಿತಗುರುಜಾಗರರಾಗಕಷಾಯಿತಮಲಸನಿಮೇಷಂ।ವಹತಿನಯನಮನುರಾಗಮಿವಸ್ಫುಟಮುದಿತರಸಾಭಿನಿವೇಶಂ ॥ ಯಾಹಿಮಾಧವಯಾಹಿಕೇಶವಮಾವದಕೈತವವಾದಂ। ತಾಮನುಸರಸರಸೀರುಹಲೋಚನಯಾತವಹರತಿವಿಷಾದಂ ಯಾಹಿಮಾಧವ॥

ಟೀ. ರಜನಿ - ರಾತ್ರಿಯಲ್ಲಿ, ಜನಿತ - ಉಂಟಾದ, ಗುರು - ಅಧಿಕವಾದ, ಜಾಗರ -ನಿದ್ರಾಭಾವದಿಂದುಂಟಾದ, ರಾಗ -- ರಕ್ತಿಮೆಯಿಂದ, ಕಷಾಯಿತಂ- ಕೆಂಪಾಗಿಮಾಡಲ್ಪಟ್ಟ, ಅಲಸನಿಮೇಷಂ, ಅಲಸ- ಮಂದವಾದ, ನಿಮೇಷಂ --- ರೆಪ್ಪೆಮುಚ್ಚೋಣವುಳ್ಳ, ಉದಿತರಸಾಭಿನಿವೇಶಂ, ಉದಿತ - ಉಂಟಾದ, ರಸ - ಶೃಂಗಾರರಸದ, ಅಭಿನಿವೇಶ - ಆಸಕ್ತಿಯು

ಕ್ಷೆ, ನಯನಂ-ನೇತ್ರವು, ಅನುರಾಗಂ - ಪ್ರೀತಿಯನ್ನು, ಸ್ಫುಟಂ - ವ್ಯಕ್ತವಾಗಿ, ವಹತೀವ - ಪೊಂದುತಲಿಧೆಯೋ ಯೆಂಬಂತೆ ಇಧೆ, ಮಾಧವ - ಲಕ್ಷ್ಮೀಪತಿಯಾದ ಹೇ ಕೇಶವ ಎಲೈ ಕೃಷ್ಣನೆ, ಯಾಹಿಯಾಹಿ - ಹೋಗು ಹೋಗು, ಕೈತವವಾದಂ- ಕಪಟವಾದ ಮಾತುಗಳನ್ನು, ಮಾವದ - ನುಡಿಯಬೇಡ, ಹೇ ಸರಸೀರುಹಲೋಚನಾ - ಎಲೈ ಕಮಲದಂತೆ ನೇತ್ರವುಳ್ಳ ಕೃಷ್ಣನೇ, ಯಾ-ಯಾವಸ್ತ್ರೀಯು, ತವ-ನಿನ್ನ, ವಿಷಾದಂ- ಮದನವ್ಯಥೆಯನ್ನು, ಹರತಿ- ಪರಿಹರಿಸುತ್ತಾಳೊ, ತಾಂ - ಆ ಸ್ತ್ರೀಯನ್ನು, ಅನುಸರ - ಅನುಸರಿಸು.

ಕಜ್ಜಲಮಲಿನವಿಲೋಚನಚುಂಬನವಿರಚಿತನೀಲಿಮರೂಪಂದಶನವಸನಮರುಣಂತವಕೃಷ್ಣತನೋತಿತನೋರನುರೂಪಂ। ಯಾಹಿಮಾಧವ॥

ಟೀ. ಕಜ್ಜಲ-ಕಾಡಿಗೆಯಿಂದ, ಮಲಿನ-ಕಪ್ಪಾದ, ವಿಲೋಚನಾ-ನೇತ್ರದ, ಚುಂಬನ - ಮುತ್ತುಕೊಳ್ಳೋಣದರಿಂದ, ವಿರಚಿತ - ಮಾಡಲ್ಪಟ್ಟ, ನೀಲಿಮರೂಪಂ - ನೀಲವರ್ಣಾಕಾರವುಳ್ಳ, ಅರುಣಂ - ಕೆಂಪಾದ, ತವ-ನಿನ್ನ, ದಶನವಸನಂ- ಅಧರವೂ, ಹೇ ಕೃಷ್ಣ --ಎಲೈ ನೀಲವರ್ಣನಾದ ಕೃಷ್ಣನೆ, ತನೋಃ --- ದೇಹದ, ಅನುರೂಪಂ --- ಸಾದೃಶ್ಯವನ್ನು, ತನೋತಿ - ಮಾಡುತಲಿಧೆ.

ವಪುರನುಸರತಿತವಸ್ಮರಸಂಗರಖರನಖರಕ್ಷತರೇಖಂಮರಕತಶಕಲಕಲಿತಕಲಧೌತಲಿಪೇರಿವರತಿಜಯಲೇಖಂ ಯಾಹಿಮಾಧವ ಯಾಹಿಕೇಶವ॥

ಟೀ. ಸ್ಮರ-ಮನ್ಮಥನ, ಸಂಗರ-ಯುದ್ಧದಲ್ಲಿ, ಖರ- ಕಠಿನವಾದ, ನಖ- ಉಗುರ್ಗಳಿಂದುಂಟಾದ, ಕ್ಷತ- ಘಾಯದ, ರೇಖಂ- ರೇಖೆಯುಳ್ಳ, ತವ - ನಿನ್ನ, ವಪುಃ- ಶರೀರವು, ಮರಕತ- ಇಂದ್ರನೀಲದ - ಶಕಲ - ಖಂಡದಲ್ಲಿ, ಕಲಿತ-ಕೆತ್ತಲ್ಪಟ್ಟ, ಕಲಧೌತ- ಸುವರ್ಣದ, ಲಿಪೇಃ- ಅಕ್ಷರದ, ರತಿಜಯಲೇಖಂ, ರತಿ-ಕ್ರೀಡೆಯ, ಜಯಲೇಖಂ-ಜಯಪತ್ರಿಕೆಯನ್ನು, ಅನುಸರತೀವ- ಅನುಸರಿಸುತ್ತಲಿಧೆಯೊ ಯೆಂಬಂತೆ ಇಧೆ.

ಚರಣಕಮಲದಳಲಕ್ತಕಸಿಕ್ತಮಿದಂತವಹೃದಯಮುದಾರಂದರ್ಶಯತೀವಬಹಿರ್ಮದನದ್ರುಮನವಕಿಸಲಯಪರಿವಾರಂ ಯಾಹಿಮಾಧವ ॥೪॥

ಟೀ. ಚರಣಕಮಲದಳ - ಕಮಲಪತ್ರದಂತಿರುವ, ಪಾದಗಳ - ಲಕ್ತಕ - ಲಾಕ್ಷಾರಸದಿಂ, ಸಿಕ್ತಂ - ನೆನಸಲ್ಪಟ್ಟ, ಉದಾರಂ - ಉತ್ಕೃಷ್ಟವಾದ, ತವ - ನಿನ್ನ, ಇದಂ ಹೃದಯಂ -- ಈ ವಕ್ಷಸ್ಥಲವು, ಮದನ -- ಮನ್ಮಥನೆಂಬ, ದ್ರುಮ - ವೃಕ್ಷದ, ನವ -- ನೂತನವಾದ, ಕಿಸಲಯ --

ತಳಿರುಗಳ, ಪರಿವಾರಂ-ಸಮೂಹವನ್ನು, ಬಹಿಃ-ಹೊರಗೆ, ದರ್ಶಯಸೀವ-ತೋರಿಸುತ್ತಲಿಧೆಯೊ ಯಂಬಂತೆ ಇಧೆ.

ದಶನಪದಂಭವದಧರಗತಂಮಮರಚಯತಿಚೇತಸಿಖೇದಂಕಥಯಸಿಕಥಮಧುನಾಪಿಮಯಾಸಹತವವಪುರೇತದಭೇದಂಯಾಹಿಮಾಧವ.

ಟೀ. ಭವದಧರಗತಂ, ಭವತ್ - ನಿನ್ನ, ಅಧರ - ತುಟಿಯನ್ನು, ಗತಂ- ಪೊಂದಿರುವ, ದಶನಪದಂ- ದಂತಕ್ಷತಚಿನ್ಹೆಯು, ಮಮ - ನನ್ನ, ಚೇತಸಿ-ಮನಸ್ಸಿನೊಳು, ಖೇದಂ-ದುಃಖವನ್ನು, ರಚಯತಿ - ಉಂಟುಮಾಡುತಲಿಧೆ, ಅಧುನಾಪಿ-ಈಗಲೂಕೂಡ, ಮಯಾಸಹ -- ನನ್ನೊಡನೆ, ತವ- ನಿನ್ನ, ಎತತ್ - ಈ, ವಪುಃ- ಶರೀರವನ್ನು, ಅಭೇದಂ - ಭೇದವಿಲ್ಲದೆ ಇರುವದನ್ನಾಗಿ, ಕಥಂ - ಹ್ಯಾಗೆತಾನೆ, ಕಥಯಸಿ -- ಹೇಳುತಲಿಧಿಯೆ, ಯಾಹಿ- ಯಾಹಿ- ಪೊ ಪೊ

ಬಹಿರಿವಮಲಿನತರಂತವಕೃಷ್ಣಮನೋಪಿಭವಿಷ್ಯತಿನೂನಂಕಥಮನುವಂಚಯಸೆಜನಮನುಗತಮಸಮಶರಜ್ವಲಮಾನಂಯಾಹಿ॥

ಟೀ. ಹೇ ಕೃಷ್ಣ-ಎಲೈ-ಕೃಷ್ಣವರ್ಣನಾದ ಶ್ರೀಕೃಷ್ಣನೆ, ತವ-- ನಿನ್ನ, ಮನೋಪಿ-ಮನಸ್ಸುಕೂಡ, ಬಹಿರಿವ-- ಶರೀರದಲ್ಲೋಪಾದಿಯಲ್ಲಿ, ಮಲಿನತರಂ-ಅತ್ಯಂತಮಲಿನವಾಗಿ, ಭವಿಷ್ಯತಿ- ಆಗುತಲಿಧೆ, ನೂನಂ- ನಿಶ್ಚಯವು, ಅಸಮಶರಜ್ವಲಮಾನಂ, ಅಸಮಶರ- ಮನ್ಮಥನಿಂದ, ಜ್ವಾಲಮಾನಂ- ತಪಿಸುತಲಿರುವ, ಅನುಗತಂ- ಅನುಸರಿಸಿಬಂದಂಥಾ, ಜನಂ-- ಜನವನ್ನು, ಕಥಂ-ಹ್ಯಾಗೆ- ಅನುವಂಚಯಸೆ- ವಂಚಿಸುತಲಿಧೀಯೆ,ಯಾಹಿ ಯಾಹಿ ಹೋಗು ಹೋಗು.

ಭ್ರಮತಿಭವಾನಬಲಾಕಬಲಾಯವನೇಷುಕಿಮತ್ರವಿಚಿತ್ರಂಪ್ರಥಯತಿಪೂತನಿಕೈವವಧೂವಧನಿರ್ದಯಬಾಲಚರಿತ್ರಂ ಯಾಹಿ ಯಾಹಿ॥

ಟೀ. ಭವಾನ್ -- ನೀನು, ವನೇಷು --- ವನಗಳಲ್ಲಿ, ಅಬಲಾಕಬಲಾಯ, ಅಬಲಾ - ಸ್ತ್ರೀರುಗಳ, ಕಬಳಾಯ -- ಕಬಳಕ್ಕೋಸ್ಕರ, ಭ್ರಮತಿ -- ಸಂಚರಿಸುತ್ತಿಧಿಯೆ, ಪೂತನಿಕೈವ --- ಪೂತನಿಯೆಂಬರಾಕ್ಷಸಿಯೆ, ತ್ವಾಂ ---- ನಿನ್ನನ್ನು, ವಧೂವಧನಿರ್ದಯಬಾಲಚರಿತ್ರಂ, ವಧೂ --- ಸ್ತ್ರೀರುಗಳ, ವಧ--ಸಂಹಾರದಲ್ಲಿ, ನಿರ್ದಯ -- ಕರುಣೆಯಿಲ್ಲದ, ಬಾಲಚರಿತ್ರಂ---ಬಾಲಕ್ರೀಡೆ ಯುಳ್ಳವನನ್ನಾಗಿ, ಪ್ರಥಯತಿ -- ಪ್ರಸಿದ್ಧಪಡಿಸುತ್ತಿ, ಅತ್ರ -- ಈ ವಿಷಯದಲ್ಲಿ, ವಿಚಿತ್ರಂ -- ಆಶ್ಚರ್ಯವು, ಕಿಂ -- ಯೇನು.

ಶ್ರೀಜಯದೇವಭಣಿತರತಿವಂಚಿತಖಂಡಿತಯುವತಿವಿಲಾಪಂ ಶೃಣುತಸುಧಾಮಧುರಂವಿಬುಧಾವದತಾಪಿಸುಖಂದುರವಾಪಂ॥ ಯಾಹಿಮಾಧವ.

ಟೀ. ಹೇವಿಬುಧಾಃ - ಎಲೈವಿದ್ವಾಂಸರುಗಳಿರ, ಸುಧಾಮಧುರಂ, ಸುಧಾ - ಅಮೃತಕ್ಕಿಂತಲೂ, ಮಧುರಂ -- ಸ್ವಾದುವಾದ, ವದತಾಪಿ-- ಗ್ರಂಥಕರ್ತೃವಿನಿಂದಲೂಕೂಡಾ, ದುರವಾಪಂ -- ಹೊಂದಲಶಕ್ಯವಾದ, ಸುಖಂ -- ಸುಖಕರವಾದ, ಶ್ರೀಜಯದೇವ -- ಜಯದೇವನೆಂಬಕವಿಯಿಂದ, ಭಣಿತ - ಹೇಳಲ್ಪಟ್ಟ, ರತಿ - ಸುರತದಿಂದ, ವಂಚಿತ - ವಂಚಿಸಲ್ಪಟ್ಟ, ಖಂಡಿತಯುವತಿ -- ಖಂಡಿತನಾಯಕಿಯಾದ ರಾಧೆಯ, ವಿಲಾಪಂ - ಪ್ರಲಾಪವನ್ನು, ಶೃಣುತ - ಕೇಳಿರಿ.

ತಾ. ಎಲೈ ಕೃಷ್ಣನೆ ಜಾಗರಣೆಯಿಂ ಕೆಂಪಾದ ನಿನ್ನ ಕಣ್ಗಳು ನೇತ್ರಚುಂಬನದಿಂ ಕಪ್ಪಾದ ನಿನ್ನ ತುಟಿಯು ತರುಣಿಯ ಚರಣತಾಡನದಿಂದ ರಕ್ತವರ್ಣವಾದ ನಿನ್ನೆದೆಯು ಮತ್ತೋರ್ವ ಕಾಮಿನೀಯೊಡಗೂಡಿ ನೀನುಮಾಡಿದ ಪರಿಪರಿಸುರತ ಚಾತುರ್ಯಂಗಳಂ ಸೂಚಿಸುತಲಿಥೆ ಇಂತಿರ್ಪನಿನ್ನಂ ಕಂಡುವ್ಯಸನಗೊಂಡಿರುವ ನನ್ನೊಡನೆ ಕಪಟನುಡಿಗಳಂನು ನುಡಿಯಬೇಡ ಯಾವರಮಣಿಯು ನಿನ್ನಂ ಸಂತೋಷ ಪಡಿಸುವಳೊ ಆವಳಂ ಪೊಂದುವನಾಗೆಂದು ರಾಧೆಯು ನಂದ ನಂದನನು ನಿಂದಿಸುತಿರ್ದಳು.

ಶ್ಲೋ. ಮಮೆದಂಪಶ್ಯಂತ್ಯಾಃಪ್ರಸರದನುರಾಗಂಬಹಿರಿವಪ್ರಿಯಾಪಾದಾಲಕ್ತಛ್ಛುರಿತಮರುಣಛ್ಛಾಯಹೃದಯಂಮಮಾದ್ಯಪ್ರಖ್ಯಾತಪ್ರಣಯಭರಭಂಗೇನಕಿತವತ್ವದಾಲೋಕಶ್ಶೋಕಾದಿವಕಿಮಪಿಲಜ್ಜಾಂಜನಯತಿ॥

ಟೀ. ಹೇಕಿತವ - ಎಲೈ ವಂಚಕನಾದ ಶ್ರೀಕೃಷ್ಣನೇ, ತ್ವದಾಲೋಕಃ, ತ್ವತ್ - ನಿನ್ನ, ಆಲೋಕಃ - ದರ್ಶನವು, ಪ್ರಿಯಾಪಾದಾಲಕ್ತಛ್ಛುರಿತಂ, ಪ್ರಿಯಾ - ನಾಯಕಿಯ, ಪಾದ - ಚರಣಗಳ, ಅಲಕ್ತ-ಲಾಕ್ಷಾರಸದಿಂದ, ಛ್ಛುರಿತಂ - ವ್ಯಾಪ್ತವಾದ್ದದಕಾರಣವೆ, ಬಹಿಃ -- ಹೊರಗೆ, ಪ್ರಸರದನುರಾಗಮಿವ, ಪ್ರಸರತ್ -- ಪೊರಮಡುವ, ಅನುರಾಗಮಿವ, ಪ್ರೀತಿಯುಳ್ಳದ್ದೋ ಎಂಬಂತಿರುವ, ಇದಂ -- ಈ, ಅರುಣಛ್ಛಾಯಹೃದಯಂ, ಅರುಣ - ಕೆಂಪಾದ, ಛಾಯ -- ಕಾಂತಿಯುಳ್ಳ, ಹೃದಯಂ -- ವಕ್ಷಸ್ಥಳವನ್ನು, ಪಶ್ಯಂತ್ಯಾಃ - ನೋಡುತಲಿರುವ, ಮಮ -- ನನಗೆ, ಅದ್ಯ -- ಈಗ, ಪ್ರಖ್ಯಾತ - ಪ್ರಸಿದ್ಧವಾದ, ಪ್ರಣಯ - ಪ್ರೀತಿಯ, ಭರ - ಆಧಿಕ್ಯದ, ಭಂಗೇನ - ನಾಶದಿಂದ, ಶೋಕಾದಿವ-ದುಃಖದ್ದೆಸೆಯಿಂದ ಲೋಯುಂಟಾಂತೆ, ಕಿಮಪಿ-ಒಂದಾನೊಂದು, ಲಜ್ಜಾಂ - ನಾಚಿಕೆಯನ್ನು,

ಜನಯತಿ-ಉಂಟುಮಾಡುತಲಿಥೆ.

ತಾ, ಎಲೈ ಧೂರ್ತನಾದ ಕೃಷ್ಣನೆ ನಿನಗೆ ಪ್ರೀಯಳಾದ ತರುಣಿಯ ಚರಣ ಲಾಕ್ಷಾರಸದಿಂ ದರುಣವಾದುದರಿಂ ಅವಳ ವಿಷಯವಾದ ಅನುರಾಗವಂ ಪ್ರಕಾಶವಾಡುತ್ತದೆಯೋ ಯಂಬಂತಿರುವ ನಿನ್ನ ವಕ್ಷಸ್ಥಲವಂ ನೋಡುತಲಿರುವ ಸನಗೆ ನಿನ್ನ ದರ್ಶನವು ಪ್ರೀತಿಭಂಗದಿಂ ದುಂಟಾದ ದುಃಖದಿಂದಲೋ ಯಂಬಂತೆ ವೊಂದುವಿಧವಾದ ಲಜ್ಜೆಯಂನ್ನುಂಟುಮಾಡುತಲಿಥೆ. (ಗೀತಗೋವಿಂದವೆಂಬ ಮಹಾಕಾವ್ಯದೋಳ್ ಸರ್ಗ ಎಂಟಕ್ಕಾಂ ಮಂಗಳಮಹಾ.)

ಶ್ಲೋ- ತಾಮಥಮನ್ಮಥಖಿನ್ನಾಂರತಿರಸಭಿನ್ನಾಂವಿಷಾದಸಂಪನ್ನಾಂ॥ಅನುಚಿಂತಿತಹರಿಚರಿತಾಂಕಲಹಾಂತರಿತಾಮುವಾಚರಹಸಿಸಖೀ॥

ಟೀ. ಅಥ-ಅನಂತರದಲ್ಲಿ, ಸಖೀ-ಸ್ನೇಹಿತೆಯು, ಮನ್ಮಥಖಿನ್ನಾಂ, ಮನ್ಮಥ- ಮನ್ಮಥನಿಂದ, ಖಿನ್ನಾಂ - ಬಳಲಿರುವಂಥಾ, ರತಿರಸಭಿನ್ನಾಂ, ರತಿ -- ಸುರತದ, ರಸ-ಅನುರಾಗದಿಂದ, ಭಿನ್ನಾಂ -- ವಿರಹಿತಳಾದ, ವಿಷಾದಸಂಪನ್ನಾಂ, ವಿಷಾದ -- ದುಃಖದೊಡನೆ, ಸಂಪನ್ನಾಂ -- ಕೂಡಿಕೊಂಡಿರುವ, ಅನುಚಿಂತಿತಹರಿಚರಿತಾಂ, ಅನುಚಿಂತಿತ -- ಆಲೋಚಿಸಲ್ಪಟ್ಟ, ಹರಿ - ಶ್ರೀಕೃಷ್ಣನ, ಚರಿತಾಂ -- ಚರಿತ್ರೆಯುಳ್ಳ, ಕಲಹಾಂತರಿತಾಂ, ಕಲಹಾಂತರಿತೆಯಂಬನಾಯಕಿಯಾದ, ತಾಂ -- ಆರಾಧೆಯನ್ನ ಕುರಿತು, ರಹಸಿ- ಏಕಾಂತದಲ್ಲಿ, ಉವಾಚ-ಹೇಳದಳು.

ತಾ. ಅನಂತರದೋಳ್ ಸಖಿಯು ಮನ್ಮಥನಿಂ ಪೀಡಿಸಲ್ಪಟ್ಟ ಸುರತ ಸೌಖ್ಯಹೀನಳಾಗಿ ದುಃಖಿಸುತ ಶ್ರೀಕೃಷ್ಣನ ಚರಿತ್ರಮಂ ಮನದೋಳ್ ಸ್ಮರಿಸುತ ಕಲಹಾಂತರಿತಳಾದ ರಾಧೆಯಂಕುರಿತಿಂತೆಂದಳು.

ಅಷ್ಟದಶಾಷ್ಟಪದಿ ಪ್ರಾರಂಭಃ, ರಾಗ--ಘೌರ್ಜರಿ.

ಹರಿರಭಿಸರತಿವಹತಿಮಧುಪವನೆಕಿಮಪರಮಧಿಕಸುಖಂಸಖಿಭವನೆ॥ಪ॥
ಮಾಧವೇರಮಾಧವೆಮಾಕುರುಮಾನಿನಿಮಾನಮಯೆಮಾಧವೆರಮಾಧವೆ॥

ಟೀ. ಹೇಸಖಿ - ಎಲೈಸಖಿಯೆ, ಮಧುಪವನೆ, ಮಧು -- ವಸಂತಕಾಲದ, ಪವನೆ -- ಮಾರುತವು, ವಹತಿಸತಿ -- ಬೀಸುತ್ತಿರಲಾಗಿ, ಹರಿಃ - ಶ್ರೀಕೃಷ್ಣನು, ಅಭಿಸರತಿ -- ಅನುಸರಿಸುತಲಿಥಾನೆ, ಭವನೆ - ಗೃಹದಲ್ಲಿ, ಅಪರಂ - ಮತೊಂದಾದ, ಅಧಿಕಸುಖಂ, ಅಧಿಕ - ಹೆಚ್ಚಾದ, ಸುಖಂ - ಸೌಖ್ಯವು, ಕಿಂ - ಯೇನು, ಅಯಿಮಾನಿನಿ - ಎಲೈ ರಾಧೆಯೆ, ರಮಾಧವೆ - ಲಕ್ಷ್ಮೀಪತಿಯಾದ, ಮಾಧವೆ -- ಶ್ರೀಕೃಷ್ಣನಲ್ಲಿ, ಮಾನ-

ಕೋಪವನ್ನು ಮಾಕುರು-ಮಾಡಬೇಡ.

ಪ. ತಾಳಫಲಾದಪಿಗುರುಮತಿಸರಸಂಕಿಮುವಿಫಲೀಕರುಷೇಕುಚಕ ಲಶಂಮಾಧವೇರಮಾಧವೇ॥

ಟೀ. ತಾಳಫಲಾದಪಿ, ತಾಳ-ವ್ರೋಲೆಮರದ, ಫಲಾದಪಿ - ಹಣ್ಣಿನ ದೆಸೆಯಿಂದಲೂ, ಗುರುಂ - ಮಹತ್ತಾದ, ಅತಿಸರಸಂ -- ಅಧಿಕವಾದಕಾಠಿಣ್ಯಮೊದಲಾದ ಗುಣಗಳುಳ್ಳ, ಕುಚಕಲಶಂ -- ಕುಂಭಕುಚವಂ, ಕಿಮು - ಯಾತಕ್ಕೋಸ್ಕರ, ವಿಫಲೀಕುರುಷೇ -- ವ್ಯರ್ಥವಾಗಿ ಮಾಡುತಲಿದ್ದೀಯೆ, ಮಾಧವೆ, ರಮಾಧವೆ.

ಕರಿನಕಥಿತಮಿದಮನುಪಮಮಚಿರಂಮಾಪರಿಹರಹರಿಮತಿಶಯರುಚಿರಂ ಮಾಧವೇರಮಾಧವೇ॥

ಟೀ. ಅಯಿ - ಎಲ್ಯೆರಾಧೆಯೆ, ಅಚಿರಂ-ಶೀಘ್ರವಾಗಿ, ಇದಂ-ಈ, ಕರಿನಕಥಿತಂ -- ನಿಷ್ಠುರವಚನವು, ಅನುಪಮಂ -- ಅಸದೃಶವಾದುದು, ಅತಿಶಯರುಚಿರಂ, ಅತಿಶಯ -- ಆಧಿಕ್ಯದಿಂದ, ರುಚಿರಂ -- ಮನೋಹರನಾದ, ಹರಿಂ - ಶ್ರೀಕೃಷ್ಣನನ್ನು, ಮಾಪರಿಹರ - ಬಿಡಬೇಡಾ, ಮಾಧವೆ-ರಮಾಧವೆ,

ಕಿಮಿತಿವಿಷೀದಸಿರೋಷಿವಿಕಲಾ ವಿಹಸತಿಯುವತಿಸಭಾತವಸಕಲಾ ಮಾಧವೇರಮಾಧವೇ॥

ಟೀ. ಅಯಿ - ಎಲ್ಯೆ ರಾಧೆಯೆ, ವಿಕಲಾ -- ಶೂನ್ಯಳಾಗಿ, ಕಿಮಿತಿ ವಿಷೀದಸಿ -- ಯಾತಕ್ಕೋಸ್ಕರ ದುಃಖಪಡುತ್ತೀಯೆ, ರೋದಿಷಿ - ಅಳುತ್ತೀಯೆ, ಸಕಲಾ - ಸಮಸ್ತವಾದ, ತವ - ನಿನ್ನ, ಯುವತಿಸಭಾ, ಯುವತಿ - ತರುಣೀರುಗಳ, ಸಭಾ - ಸಮೂಹವು, ವಿಹರತಿ - ನ[illegible]ತಲಿಧೆ, ಮಾಧವೆ, ರಮಾಧವೆ.

ಮೃದುಳನಳಿನದಳಶೀಲಿತಶಯನೇಹರಿಮಿವ ಲೋಕಯ ಸಫಲಯನಯನೆ ಮಾಧವೆಗಮಾಧವೆ.

ಟೀ. ಮೃದುಲ - ಕೋಮಲವಾದ, ನಳಿನ - ಕಮಲದ, ದಳ - ಗರಿಗಳಿಂದ, ಶೀಲಿತ - ರಚಿಸಲ್ಪಟ್ಟ, ಶಯನೆ - ಹಾಸಿಗೆಯಲ್ಲಿ, ಹರಿಂ - ಶ್ರೀಕೃಷ್ಣನನ್ನು, ಅವಲೋಕಯ - ನೋಡು, ನಯನೆ - ನೇತ್ರಗಳನ್ನು, ಸಫಲಯ - ಸಾರ್ಥಕಂಗಳನ್ನಾಗಿ ಮಾಡು.

ಜನಯಸಿಮನಸಿಕಿಮಿತಿಗುರುಖೇದಂಶೃಣುಮಮಸುವಚನಮನಿಹಿತಭೇದಂಮಾಧವೆ ರಮಾಧವೆ॥

ಟೀ. ಮನಸಿ - ಮನಸ್ಸಿನಲ್ಲಿ, ಗುರುಖೇದಂ, ಗುರು - ಮಹತ್ತಾದ, ಖೇದಂ - ದುಃಖವನ್ನು, ಕಿಮಿತಿ - ಯೇನೆಂದು, ಜನಯಸಿ - ಹುಟ್ಟಿಸುತ್ತಲಿದ್ದೀಯೆ, ಅವಿಹಿತಭೇದಂ, ಅವಿಹಿತ -- ಮಾಡಲ್ಪಟ್ಟದ್ದೇ ಇರುವ, ಭೇದಂ - ಭೇದವುಳ್ಳ, ಮಮ - ನನ್ನ, ಸುವಚನಂ -- ಒಳ್ಳೇನುಡಿಯನ್ನು, ಶೃಣು - ಕೇಳು, ಮಾಧವೆ ರಮಾಧವೆ.

ಹರಿರುಪಯಾತುವದತುಬಹುಮಧುರಂಕಿಮಿತಿಕರೋಷಿಹೃದಯಮತಿವಿಧುರಂ ಮಾಧವೆ॥

ಟೀ. ಹರಿಃ -- ಶ್ರೀಕೃಷ್ಣನು, ಉಪಯಾತು -- ಬರಲಿ, ಬಹುಮಧುರಂ -- ಅತ್ಯಂತಮನೋಹರವಾಗಿ, ವದತು -- ಮಾತುಗನ್ನಾಡಲಿ, ಕಿಮಿತಿ - ಯೇನೆಂದು, ಹೃದಯಂ - ಮನಸ್ಸನ್ನು, ಅತಿವಿಧುರಂ -- ಅತ್ಯಂತದುಃಖಪಡುವದನ್ನಾಗಿ, ಕರೋಷಿ --- ಮಾಡುತಲಿದ್ದೀಯೆ, ಮಾಧವೆ ರಮಾಧವೆ.

ಶ್ರೀಜಯದೇವಭಣಿತಮತಿಲಲಿತಂಸುಖಯತುರಸಿಕಜನಂಹರಿಚರಿತಂ॥ಮಾ

ಟೀ. ಶ್ರೀಜಯದೇವಭಣಿತಂ -- ಶ್ರೀಜಯದೇವಕವಿಯಿಂದಹೇಳಲ್ಪಟ್ಟ, ಅತಿಲಲಿತಂ--ಬಹಳಮನೋಹರವಾದ, ಹರಿಚರಿತ್ರಂ -- ಶ್ರೀಕೃಷ್ಣಸ್ವಾಮಿಯಚರಿತ್ರವು, ರಸಿಕಜನಂ -- ರಸಜ್ಞರಾದ ಜನಗಳನ್ನು, ಸುಖಯತು- ಸಂತೋಷಪಡಿಸಲಿ.

ತಾ. ಎಲೈ ರಾಧೆಯೆ ವಸಂತಸಮಯ ಮಂದಮಾರುತದಿಂ ವ್ಯಥೆಪಟ್ಟು ಅನುಸರಿಸಿ ಬಂದ ಹರಿಯಂ ಬಿಟ್ಟು ಅತಿ ರಮಣೀಯವಾದ ನಿನ್ನ ಯೌವನವಂ ವ್ಯರ್ಥವಂಮಾಡುತಲಿದ್ದೀಯೆ ಆದ್ದರಿಂದ ಶ್ರೀಕೃಷ್ಣಸ್ವಾಮಿಯಲ್ಲಿ ನೀನುಕೋಪವಂಮಾಡುವದು ಅನುಚಿತವಲ್ಲವೆ ನನ್ನ ನುಡಿಗಳಂಲಾಲಿಸಿ ತಳಿರುಗಳ ತಲ್ಪದಲ್ಲಿ ಶ್ರೀಕೃಷ್ಣ ಸ್ವಾಮಿಯನ್ನು ನೋಡಿ ನೇತ್ರವಂ ಸಾಫಲ್ಯಗೊಳಿಸೂ ಯೆಂದು ಕೆಳದಿಯು ಪೇಳಿದಳು.

ಶ್ಲೋ. ಸ್ನಿಗ್ಧೇಯತ್ಪರುಷಾಸಿಯತ್ಪ್ರಣಮತಿಸ್ತಬ್ಧಾಸಿಯದ್ರಾಗಿಣಿದ್ವೇಷಸ್ಥಾಸಿಯದುನ್ಮುಖೇವಿಮುಖತಾಂಯಾತಾಸಿತಸ್ಮಿನ್ಪ್ರಿಯೇ॥ ತದ್ಯುಕ್ತಂವಿಪರೀತಕಾರಿಣಿತವಶ್ರೀಖಂಡಚರ್ಚಾವಿಷಂಶೀತಾಂಶುಸ್ತಪನೋಹಿಮಂಹುತವಹಃಕ್ರೀಡಾಮುದೋಯಾತನಾಃ॥

ಟೀ. ತಸ್ಮಿನ್ಪ್ರಿಯೇ-ಆನಾಯಕನಾದ ಶ್ರೀಕೃಷ್ಣಸ್ವಾಮಿಯು, ಸ್ನಿಗ್ಧೇಸತಿ-- ಸ್ನೇಹವುಳ್ಳವನಾಗುತ್ತಿರಲಾಗಿ, ಯತ್ -- ಯಾವಕಾರಣದ್ದೆಸೆಯಿಂದ, ಪರುಷಾಸಿ -- ಕೋಪವುಳ್ಳವಳಾಗುತ್ತಿದ್ದೀಯೊ, ಪ್ರಣಮತಿಸತಿ--

ನಮ್ರನಾಗುತ್ತಿರಲಾಗಿ, ಯತ್-ಯಾವಕಾರಣದ್ದೆಸೆಯಿಂದ, ಸ್ತಬ್ಧಾಸಿ-ಕಠಿಳಾಗುತ್ತಿಯೊ, ರಾಗಿಣಿಸತಿ--ಪ್ರೀತಿಯುಕ್ತನಾಗುತ್ತಿರಲಾಗಿ, ಯತ್-ಯಾವಕಾರಣದ್ದೆಸೆಯಿಂದ, ದ್ವೇಷಸ್ಥಾಸಿ -- ದ್ವೇಷವನ್ನು ಮಾಡುತಲಿದ್ದಿಯೊ, ಉನ್ಮುಖೇಸತಿ -- ಅಭಿಮುಖನಾಗುತ್ತಿರಲಾಗಿ, ಯತ್ -- ಯಾವಕಾರಣದ್ದೆಸೆಯಿಂದ, ವಿಮುಖತಾಂ -- ಪರಾಙ್ಮುಖತ್ವವನ್ನು, ಯಾತಾಸಿ-ಹೊಂದಿದವಳಾಗುತ್ತಿಯೊ, ತತ್-ಆ ಕಾರಣದ್ದೆಸೆಯಿಂದ, ಹೇವಿಪರೀತಕಾರಿಣಿ -- ಎಲೈ ವ್ಯತ್ಯಾಸಕಾರ್ಯವನ್ನು ಮಾಡುತಲಿರುವ ರಾಧೆಯೆ, ತವ ---ನಿನಗೆ, ಶ್ರೀಖಂಡಚರ್ಚಾ -- ಶ್ರೀಗಂಧಲೇಪನವು, ವಿಷಂ--ವಿಷವು, ಶೀತಾಂಶುಃ-- ಚಂದ್ರನು, ತಪನಃ-- ಸೂರ್ಯನು, ಹಿಮಂ-- ಮಂಜು, ಹುತವಹಃ -- ಬೆಂಕಿಯು, ಕ್ರೀಡಾಮುದಃ -- ಸುರತಾನಂದಗಳು, ಯಾತನಾಃ-ವೇದನೆಗಳು, ಯುಕ್ತಂ ಉಚಿತವೆಸರಿ.

ತಾ. ಎಲೈರಾಧೆಯೆ ಶ್ರೀ ಕೃಷ್ಣಸ್ವಾಮಿಯು ಯಾವವಿಧದಿಂದ ಅನುಸರಿಸಿ ಬಂದಾಗ್ಯೂ ಪ್ರತಿಕೂಲಕಾರ್ಯವಂ ಮಾಡುತಲಿರುವ ನಿನಗೆ ಶ್ರೀಗಂಧವೊದಲಾದ ಸಂಭೋಗಯೋಗ್ಯವಸ್ತುಗಳೆಲ್ಲವಂ ವಿಪರೀತಂಗಳಾಗಿ ಯಿರುವದು ಯುಕ್ತವಲ್ಲವೆ,

ಗೀತಗೋವಿಂದವೆಂಬ ಮಹಾಕಾವ್ಯದ ರಸಿಕ ರಂಜನೀ ಯೆಂಬ ಟೀಕಿನೊಳ್ ನವಮಸ್ಸರ್ಗಕ್ಕಂ ಮಂಗಳಂಮಹಾ.

ಶ್ಲೋ. ಅತ್ರಾಂತರೆಮಸೃಣರೋಷವಶಾದಸೀಮ ನಿಶ್ವಾಸನಿಸ್ಸಹಮುಖೀಂಸುಮುಖೀಮುಪೇತ್ಯ ॥ಸವ್ರೀಡಮೀಕ್ಷಿತಸಖೀವದನಾಂದಿನಾಂತೆಸಾನಂದಗದ್ಗದಪದಂಹರಿರಿತ್ಯುವಾಚ.

ಟೀ. ಅತ್ರಾಂತರ--ಈ ಮಧ್ಯದಲ್ಲಿ, ಹರಿಃ -- ಶ್ರೀಕೃಷ್ಣಸ್ವಾಮಿಯು, ಮಸೃಣರೋಷವಶಾತ್, ಮಸೃಣ -- ಸಂಪೂರ್ಣವಾದ, ರೋಷ -- ಕೋಪದ, ವಶಾತ್ --- ಆಧೀನದಿಂದ, ಅಸೀಮನಿಶ್ವಾಸನಿಸ್ಸಹಮುಖೀಂ, ಅಸೀಮ -- ತಡೆಯಿಲ್ಲದ, ನಿಶ್ವಾಸ -- ನಿಟ್ಟುಸುರನ್ನು, ನಿಸ್ಸಹ -- ಸಹಿಸಲಾರದ, ಮುಖೀಂ --ಮುಖವುಳ್ಳ, ಸವ್ರೀಡಂ-- ಲಜ್ಜೆಯೊಡಗೂಡಿ, ಈಕ್ಷಿತಸಖೀವದನಾಂ, ಈಕ್ಷಿತ -- ನೋಡಲ್ಪಟ್ಟ, ಸಖೀ--ಸ್ನೇಹಿತೆಯ, ವದನಾಂ -- ಮುಖವುಳ್ಳ, ಸುಮುಖೀಂ--ಆರಾಧೆಯನ್ನು, ದಿನಾಂತೆ -- ಸಾಯಂಕಾಲದಲ್ಲಿ, ಉಪೇತ್ಯ-ಪೊಂದಿ, ಸಾನಂದಗದ್ಗದಪದಂ, ಸಾನಂದ-ಹರ್ಷದೊಡಗೂಡಿ, ಗದ್ಗದ--ಸ್ವರವುಳ್ಳ, ಪದಂ -- ಮಾತುಗಳುಳ್ಳಣಹ್ವಾಗೋಹಾಗೆ, ಇತಿ-ಈ ಮುಂದೇ ಹೇಳುವ ರೀತಿಯಾಗಿ, ಉವಾಚ-ನುಡಿದನು.

ತಾ. ಯೀ ಮನ್ಯದಲ್ಲಿ ಸಾಯಂಕಾಲದೊಳು ಕದುಕೋಪದಿಂ ತಡೆಯಿಲ್ಲದ ನಿಡುಸಿಶ್ವಾಸಮಂ ಬಿಡುತ ವ್ರೀಡೆಯೊಡಗೂಡಿ ಸಖಿಯಮೊಗಮಂ ನೋಡುತಸಿಂದಿರುವ ರಾಧೆಯಂ ಪೊಂದಿ ಶ್ರೀಕೃಷ್ಣಸ್ವಾಮಿಯು ಆನಂದದಿಂದ ಸ್ಪಷ್ಟಾಕ್ಷರವಾದ ನುಡಿಗಳಂ ನುಡಿದನು.

ಏಕೋನವಿಂಶಾಷ್ಟಪದೀ ಪ್ರಾರಂಭಃ ರಾಗ ದೇಶವರಾಳಿ.

ವದಸಿಯದಿಕಿಂಚಿದಪಿದಂತರುಚಿಕೌಮುದೀ ಹರತುದರತಿಮಿರಮತಿಘೋರಂಸ್ಫುರದಧರಶೀಧವೆತವವದನಚಂದ್ರಮಾರೋಚಯತುಲೋಚನಚಕೋರಂ ಪ್ರಿಯೆಚಾರುಶೀಲೆಪ್ರಿಯೆಚಾರುಶೀಲೆ ಮುಂಚಮಯಿಮಾನಮನಿದಾನಂಸಪದಿಮದನಾನಲೊದಹತಿಮಮಮಾನ ಸಂದೆಹಿಮುಖಕಮಲಮಧುಪಾನಂಪ್ರಿಯೆಚಾರುಶೀಲೆ ಪ್ರಿಯೆಚಾರುಶೀಲೆ, ... ... ೧

ಟೀ. ಚಾರುಶೀಲೆ, ಚಾರು -- ಮನೋಹರವಾದ, ಶೀಲೆ -- ಸ್ವಭಾವವುಳ್ಳ, ಹೆಪ್ರಿಯೆ--ಎಲೈ ಕಾಂತೆಯೆ, ಕಿಂಚಿದಪಿ -- ಸ್ವಲ್ಪವಾದರು ವದಸಿಯದಿ --- ಮಾತನಾಡಿದೆ ಯಾದರೆ, ದಂತರುಚಿಕೌಮುದೀ, ದಂತ-ಪಲ್ಗಳ, ರುಚಿ -- ಕಾಂತಿಯೆಂಬ, ಕೌಮುದೀ --- ಬೆಳ್ದಿಂಗಳು, ಅತಿಘೋರಂ -- ಅತ್ಯಂತಭೀಷಣವಾದ, ದರತಿಮಿರಂ, ದರ -- ಭಯವೆಂಬ, ತಿಮಿರಂ -- ಅಂಧಕಾರವನ್ನು, ಹರತು -- ಪರಿಹರಿಸಲಿ, ತವ--ನಿನ್ನ, ವದನಚಂದ್ರಮಾಃ, ವದನ- ಮುಖವೆಂಬ, ಚಂದ್ರಮಾಃ- ಚಂದ್ರನು ಸ್ಫುರದಧರಶೀಧವೆ, ಸ್ಫುರತ್ -- ಪ್ರಕಾಶಿಸುತಲಿರುವ, ಅಧರ -- ತುಟಿಯಶೀಧವೆ--ಮದ್ಯಕ್ಕೋಸ್ಕರ, ಲೋಚನಚಕೋರಂ, ಲೋಚನ - ನೇತ್ರವೆಂಬ, ಚಕೋರಂ-ಚಕೋರಪಕ್ಷಿಯನ್ನು, ರೋಚಯತು--ಅಭಿಲಾಷೆಯುಳ್ಳದ್ದನ್ನಾಗಿಮಾಡಲಿ, ಮಯಿ -- ನನ್ನಲ್ಲಿ, ಅನಿದಾನಂ -- ನಿಷ್ಕಾರಣವಾದ, ಮಾನಂ-- ಕೋಪವನ್ನು, ಮುಂಚ -- ಬಿಡು, ಮದನಾನಲಃ, ಮದನ-- ಮನ್ಮಥನೆಂಬ, ಅನಲಃ -- ಅಗ್ನಿಯು, ಮಮ -- ನನ್ನ, ಮಾನಸಂ -- ಮನಸ್ಸನ್ನು, ಸಪದಿ -- ತತ್‌ಕ್ಷಣದಲ್ಲಿ, ದಹತಿ -- ಸುಡುತಲಿಧೆ ಮುಖಕಮಲ ಮಧುಪಾನಂ, ಮುಖ --- ಮುಖವೆಂಬ, ಕಮಲ -- ತಾವರೆಪುಷ್ಪದ, ಮಧು--ಮಕರಂದದ, ಪಾನಂ-- ಪಾನವನ್ನು, ದೆಹಿ -- ಕೊಡು, ಪ್ರಿಯೆಚಾರುಶೀಲೆ.

ಸತ್ಯಮೆವಾಸಿಯದಿಸುದತಿಕೊಪಿನೀದೇಹಿಖರನಖರಶರಘಾತಂ ಘಟಯಭುಜಬಂಧನಂಜನಯರದಖಂಡನಂ ಯೆನವಾಭವತುಸುಖಜಾತಂಪ್ರಿಯೆಚಾರುಶೀಲೆ. ... ... ... ... ೨

ಟೀ॥ ಹೇಸುದತಿ-- ಎಲೈಶೋಭನಕರವಾದ ದಂತಂಗಳುಳ್ಳರಾಧೆಯೇ-- ಮಯಿ -- ನನ್ನಲ್ಲಿ, ಸತ್ಯಮೇವ -- ನಿಶ್ಚಯವಾಗಿಯೇ, ಕೋಪಿನಿ-- ಕೋಪವುಳ್ಳವಳಾಗಿ, ಅಸಿಯದಿ -- ಇದ್ದೀಯೆಯಾದರೇ, ಖರನಖರಶರಘಾತಂ-ಖರ-ಕಠಿನವಾದ, ನಖರ -- ಉಗುರುಗಳೆಂಬ, ಶರ-- ಬಾಣಗಳಿಂ, ಘಾತಂ-ಪ್ರಹಾರವನ್ನು, ದೇಹಿ -- ಕೊಡು, ಭುಜಬಂಧನಂ, ಭುಜ- ತೋಳುಗಳಿಂದ, ಬಂಧನಂ--ಬಂಧನವನ್ನು, ಘಟಯ--ಸೇರಿಸು, ರದಖಂಡನಂ, ರದ--ಹಲ್ಲುಗಳಿಂದ, ಖಂಡನಂ-ಕಚ್ಚುಣವನ್ನು, ಜನಯ--ಉಂಟುಮಾಡು, ಯೇನವಾ-ಯಾವವಿಧದಿಂದಲಾಗಲೀ, ಸುಖಜಾತಂ--ಸಂತೋಷಾದಿಕ್ಯವು, ಭವತು-ಆಗಲಿ॥

ನೀಲನಳಿನಾಭಮಪಿತನ್ವಿತವಲೋಚನಂಧಾರಯತಿಕೋಕನದರೂಪಂ। ಕುಸುಮಶರಬಾಣಭಾವೇನಯದಿರಂಜಯತಿ ಕೃಷ್ಣಮಿದ ಮೇತದನುರೂಪಂ ಪ್ರಿಯೇಚಾರುಶೀಲೇ. ... ... ... ... ೩॥

ಟೀ॥ ಹೇತನ್ವಿ --- ಎಲೈ ರಾಧೆಯೆ, ತವ --- ನಿನ್ನ, ನೀಲನಳಿನಾಭಮಪಿ, ನೀಲನಳಿನ -- ಕನ್ನೈದಲೆಪುಷ್ಪದ, ಆಭಂ -- ಕಾಂತಿಯಂತೆನೆವಕಾಂತಿಯುಳ್ಳದ್ದಾದಾಗ್ಯೂ, ಲೋಚನಂ-ನೇತ್ರವು, ಕೋಕನದರೂಪಂ, ಕೋಕನದ--ಕೆಂದಾವರೆಯ, ರೂಪಂ -- ಸ್ವರೂಪವನ್ನು, ಧಾರಯತಿ -- ಧರಿಸುತಲಿದೆ, ಇದಂ -- ಈ ನೇತ್ರವು, ಕುಸುಮಶರಬಾಣಭಾವೇನ, ಕುಸುಮಶರ-- ಮನ್ಮಥನ; ಬಾಣ -- ಅಂಬಿನ, ಭಾವೇನ -- ಭಾವದಿಂದ ಕೃಷ್ಣಂ -- ನೀಲವರ್ಣವನ್ನು, ಶ್ರೀಕೃಷ್ಣಸ್ವಾಮಿಯನ್ನು, ರಂಜಯತಿಯದಿ-ಕೆಂಪಾಗಿಮಾಡುವಂಥಾದ್ದು ಆದರೆ ಸಂತೋಷಪಡಿಸಿತೆ ಆದರೆ, ಏತತ್-ಈ ಅರಣ್ಯವು, ಅನುರೂಪಂ-ಅನುಗುಣವಾದುದು

ತ್ವಮಸಿಮಮಭೂಷಣಂ ತ್ವಮಸಿಮಮಜೀವನಂತ್ವಮಸಿಮಮಭವಜಲಧಿರತ್ನಂ ಭವತುಭವತೀಹಮಯಿಸತತಮನುರೋಧಿನೀತತ್ರಮಮಹೃದಯಮತಿಯತ್ನಂ ಪ್ರಿಯೆ.

ಟೀ॥ ಹೇಪ್ರಿಯೇ-- ಎಲೈರಾಧೆಯೆ, ತ್ವಂ -- ನೀನು, ಮಮ -- ನನ್ನ, ಭೂಷಣಂ -- ಅಲಂಕಾರವಾಗಿ, ಅಸಿ--ಆಗುತಲಿದ್ದೀಯೆ, ತ್ವಂ--ನೀನು, ಮಮ -- ನನ್ನ, ಜೀವನಂ -- ಜೀವನೋಪಾಯವಾಗಿ, ಅಸಿ -- ಆಗುತಲಿದ್ದೀಯೆ, ತ್ವಂ--ನೀನು, ಮಮ--ನನ್ನ, ಭವಜಲಧಿರತ್ನಂ, ಭವ -- ಭವಸಂಸಾರವೆಂಬ, ಜಲಧಿ -- ಸಮುದ್ರಕ್ಕೆ, ರತ್ನಂ -- ರತ್ನವುಂ, ಅಸಿ-- ಆಗುತಲಿದ್ದೀಯೆ, ಭವತೀ-- ನೀನು, ಇಹಮಯಿ -- ಈನನ್ನಲ್ಲಿ, ಸತತಂ --

ನಿರಂತರದಲ್ಲಿ, ಅನುರೋಧಿನೀ -- ಅನುಸರಣವುಳ್ಳವಳಾಗಿ, ಭವತು -- ಆಗು, ತತ್ರ-ಆವಿಷಯದೊಳು, ಮಮ-ನನ್ನ, ಹೃದಯಂ-ಮನಸ್ಸು, ಅತಿಯತ್ನಂ-ಅತ್ಯಂತಪ್ರಯತ್ನವುಳ್ಳದ್ದು ಪ್ರಿಯೆ.

ಸ್ಫುರತುಕುಚಕುಂಭಯೊರುಪರಿಮಣಿಮಂಜರೀ ರಂಜಯತು ತವ ಹೃದಯದೇಶಂ ರಸತುರಶನಾಪಿತವಘನಜಘನಮಂಡಲೆ ಘೋಷಯತುಮನ್ಮಥನಿದೇಶಂಪ್ರಿಯೆಚಾರುಶೀಲೆ. ... ... ... ೫॥

ಟೀ. ಹೇಪ್ರಿಯೆ -- ಎಲ್ಲೈರಾಧೆಯೆ, ತವ -- ನಿನ್ನ, ಕುಚಕುಂಭಯೋಃ -- ಸ್ತನಕಲಶಗಳ, ಉಪರಿ -- ಮೇಲೆ, ಮಣಿಮಂಜರೀ -- ಮುತ್ತಿನ ಹಾರವು, ಸ್ಫುರತು -- ಪ್ರಕಾಶಿಸಲಿ, ತವ -- ನಿನ್ನ, ಹೃದಯದೇಶಂ-ವಕ್ಷಸ್ಥಳವನ್ನು, ರಂಜಯತು -- ಅಲಂಕರಿಸಲಿ, ತವ -- ನಿನ್ನ, ರಶನಾಪಿ -- ಒಡ್ಯಾಣವುಕೂಡ, ಘನಜಘನಮಂಡಲೆ, ಘನ -- ವಿಸ್ತಾರವಾದ ಜಘನಮಂಡಲೆ -- ಕಟಿಪುರೋಭಾಗದಲ್ಲಿ, ರಸತು -- ಧ್ವನಿಗೈಯ್ಯಲಿ, ಮನ್ಮಥನಿದೇಶಂ-ಮನ್ಮಥನಅಪ್ಪಣೆಯನ್ನು, ಘೋಷಯತು--ಸಾರಲಿ ಪ್ರಿಯೆಚಾರುಶೀಲೆ.

ಸ್ಥಲಕಮಲಗಂಜನಂಮಮಹೃದಯರಂಜನಂಜನಿತರತಿರಂಗಪರಭಾಗಂಭಣ ಮಸೃಣವಾಣಿಕರವಾಣಿಚರಣದ್ವಯಂ ಸರಸಸದಲಕ್ತಕಸರಾಗಂ ಪ್ರಿಯೆಚಾರುಶೀಲೆ. ... ... ... ೬॥

ಟೀ. ಹೇಮಸೃಣವಾಣಿ-- ಎಲ್ಲೈ ಮನೋಹರವಾದ ಮಾತುಗಳುಳ್ಳರಾಧೆಯೆ, ಸ್ಥಲಕಮಲಗಂಜನಂ, ಸ್ಥಲಕಮಲ -- ನೆಲದಾವರೆಯನ್ನು ಗಂಜನಂ -- ತಿರಸ್ಕರಿಸುವ, ಮಮ --- ನನ್ನ, ಹೃದಯರಂಜನಂ, ಹೃದಯ -- ಮನಸ್ಸನ್ನು, ರಂಜನಂ -- ಸಂತೋಷಪಡಿಸುವ, ಹೃದಯ-- ಎದೆಯನ್ನು, ರಂಜನಂ --- ಕೆಂಪಾಗಿಮಾಡುವ, ಜನಿತರತಿರಂಗಪರಭಾಗಂ, ಜನಿತ -- ಹುಟ್ಟಿಸಲ್ಪಟ್ಟ, ರತಿ -- ರತಿದೇವಿಯ, ರಂಗ--ನಾಟ್ಯಸ್ಥಾನದ, ಪರಭಾಗಂ-- ವರ್ಣೋತ್ಕರ್ಷವುಳ್ಳ, ಚರಣದ್ವಯಂ -- ಪಾದಗಳಯುಗಳವನ್ನು ಸರಸಸದಲಕ್ತಕಸರಾಗಂ, ಸರಸ --- ಆರ್ದ್ರವಾದ, ಸತ್-ಸಮೀಚೀನವಾದ, ಅಲಕ್ತಕ-ಲಾಕ್ಷಾರಸದಿಂದ, ಸರಾಗಂ- ರಕ್ತವುಯೊಡಗೂಡಿದ್ದನ್ನಾಗಿ, ಕರವಾಣಿ-ಮಾಡುತ್ತೇನೆ, ಭಣ-ಹೇಳು.

ಸ್ಮರಗರಳಖಂಡನಂಮಮಶಿರಸಿಮಂಡನಂದೇಹಿಪದಪಲ್ಲವಮುದಾರಂಜ್ವಲತಿಮಯಿದಾರುಣೋಮದನಕದನಾನಲೋ ಹರತುತದುಪಾಹಿತವಿಕಾರಂ ॥ ಪ್ರಿಯೆಚಾರುಶೀಲೆ. ... ... ... ೭॥

ಟೀ. ಹೆಪ್ರಿಯೆ - ಎಲೈ ರಾಧೆಯೆ, ಸ್ಮರಗರಳಖಂಡನಂ, ಸ್ಮರ- ಮನ್ಮಥನೆಂಬ, ಗರಳ - ವಿಷವನ್ನು, ಖಂಡನಂ -- ಭೇದಿಸುತ್ತಲಿರುವ, ಉದಾರಂ - ಶ್ರೇಷ್ಠವಾದ, ಪದಪಲ್ಲವ -- ತಳಿರಂತಿರುವ ಚರಣವಂ, ಮ ಮ - ನನ್ನ, ಶಿರಸಿ - ಶಿರಸ್ಸಿನೋಳ್, ಮಂಡನಂ -- ಅಲಂಕಾರವನ್ನಾಗಿ, ದೇಹಿ - ಕೊಡು, ಮಯಿ - ನನ್ನಲ್ಲಿ, ದಾರುಣಃ -- ಭಯಂಕರವಾದ, ಮದನಕದನಾನಲಃ, ಮದನಕದನ -- ಮನ್ಮಥಬಾಧೆಯೆಂಬ, ಅನಲಃ -- ಅಗ್ನಿಯು, ಜ್ವಲತಿ -- ಉರಿಯುತಲಿಥೆ, ತದುಪಾಹಿತವಿಕಾರಂ. ತತ್ -- ಆ ಅಗ್ನಿಯಿಂದ, ಉಪಾಹಿತ - ಉಂಟಾದ, ವಿಕಾರಂ - ವ್ಯಥೆಯನ್ನು, ಹ ರತು - ಹೋಗಲಾಡಿಸಲಿ, ಪ್ರಿಯೆಚಾರುಶೀಲೆ.

ಇತಿಚಟುಲಚಾಟುಪಟುಚಾರುಮುರವೈರಿಣೋರಾಧಿಕಾಮಧಿವಚನಜಾತಂ ಜಯತುಪದ್ಮಾವತೀರಮಣಜಯದೇವಕವಿಭಾರತೀಭಣಿತಮಿತಿಗೀತಂ॥ಪ್ರಿ॥೮

ಟೀ. ಇತಿ - ಈಹಿಂದೆಪೇಳಿದ ರೀತಿಯಿಂ, ಚಟುಲ - ಅನುನಯ ಸ ಮರ್ಥವಾದ, ಚಾಟು - ಪ್ರಿಯೋಕ್ತಿಗಳಲ್ಲಿ, ಪಟು -- ಚತುರನಾದ, ಚಾ ರು - ಮನೋಹರನಾದ, ಮುರವೈರಿಣಃ - ಶ್ರೀಕೃಷ್ಣನ, ರಾಧಿಕಾಮಧಿ- ರಾಧಾದೇವಿಯಂ ಕುರಿತು, ವಚನಜಾತಂ - ವಾಕ್ಯಸಮೂಹ ರೂಪವಾದ, ಪದ್ಮಾವತಿ - ಪದ್ಮಾವತಿಯೆಂಬ ತರುಣಿಗೆ, ರಮಣ -- ಕಾಂತನಾದ, ಜ ಯದೇವಕವಿ--ಜಯದೇವಕವಿಯ, ಭಾರತಿ - ವಾಕ್ಯನಿಂದ, ಭಣಿತಂ -- ಬಣ್ಣಿಸಲ್ಪಟ್ಟ, ಇತಿಗೀತಂ --- ಈಗೀತವು, ಜಯತು -- ಸರ್ವೋತ್ಕೃ ಷ್ಟವಾಗಿರಲಿ.

ತಾ. ಈಪರಿಯಿಂ ಶ್ರೀಕೃಷ್ಣನು ಎಲೈ ರಾಧೆಯೆ ನಿರಪರಾಧಿಯಾ ದ ನನ್ನೊಳು ಕೋಪವಂಬಿಡೆಂದು ಪ್ರಿಯಮಧುರ ಮೃದುನುಡಿಗಳಿಂಸ ಮಾಧಾನಗೊಳಿಸುತಲಿದ್ದನು.

ಶ್ಲೋ. ಪರಿಹರಕೃತಾಶಂಕೆಶಂಕಾಂತ್ವಯಾಸತತಂಘನಸ್ತನಜಘನಯಾ ಕ್ರಾಂತೆಸ್ವಾಂತೆಪರಾನವಕಾಶಿನಿ । ಚಜತಿವಿತನೋರನ್ಯಾಧನ್ಯಾನಕಾಪಿಮ ಮಾಂತರಂ ಸ್ತನಭರಪರೀರಂಭಾರಂಭೆವಿಧೆಹಿವಿಧೇಯತಾಂ॥

ಟೀ. ಹೆಕೃತಾಶಂಕೆ -- ಎಲೈ ಬೇರೆ ಆಲೋಚನೆಯಂ ಮಾಡುತಲಿ ರುವ ರಾಧೆಯೆ, ಶಂಕಾಂ - ದುರಾಲೋಚನೆಯನ್ನು, ಪರಿಹರಿ -- ಬಿಡು, ಘನಸ್ತನಜಘನಯಾ, ಘನ -- ದಟ್ಟವಾದ, ಸ್ತನ-- ಕುಚಗಳೇನು, ಜಘ ನ - ಕಟಿಪುರೋಭಾಗವೇನು ಇವುಗಳುಳ್ಳ, ತ್ವಯಾ - ನಿನ್ನಿಂದ, ಸತತಂ- ಸಾರ್ವಕಾಲದಲ್ಲೂ, ಆಕ್ರಾಂತೆ --- ಆಕ್ರಮಿಸಲ್ಪಟ್ಟ, ಪರಾನವಕಾಶಿನಿ,

ಪರ – ಮತ್ತೋರ್ವರಿಗೆ, ಅನವಕಾಶಿನಿ – ಯೆಡೆಬಿಡದಿರುವ, ಮಮ – ನನ್ನ, ಸ್ವಾಂತೇ — ಮನಸ್ಸಿನೊಳ್, ವಿತನೋಃ — ಮನ್ಮಥನದೆಸೆಯಿಂ, ಧನ್ಯಾ – ಧನ್ಯಳಾದ, ಅನ್ಯಾ – ಬೇರೆಯಾದ, ಕಾಪಿ – ಒರ್ವರಮಣಿಯೂ, ಅಂತರಂ – ಅವಕಾಶವನ್ನು, ನಭಜತಿ – ಹೊಂದುವದಿಲ್ಲ, ಸ್ತನಭರಪರೀರಂಭಾರಂಭೇ, ಸ್ತನಭರ – ಕುಚಭಾರದ, ಪರೀರಂಭ – ಆಲಿಂಗನದ, ಆರಂಭೆ — ಪ್ರಾರಂಭದಲ್ಲಿ, ವಿಧೆಯತಾಂ — ಮಾಡಲು ಯೋಗ್ಯತೆಯನ್ನು, ವಿಧೇಹಿ – ಮಾಡು.

ತಾ. ಎಲೈ ರಾಧೆಯೆ – ಅತ್ಯಂತಪೀನಪಯೋಧರಳಾದ ನಿನ್ನಿಂದನಿರಂತರದಲ್ಲು ಆಕ್ರಮಿಸಲ್ಪಟ್ಟ ನನ್ನ ಮನಸ್ಸಿನೊಳ್ಮತ್ತೋರ್ವ ವಿಲಾಸಿನಿಯು ಪ್ರವೇಶಿಸುವಳೆಂಬಾಲೋಚನೆಯಂ ಬಿಟ್ಟು ಬಟ್ಟಕುಚಗಳಂ ಬಿಗಿದಪ್ಪಿ ಕೊಂಡೆನ್ನಂ ಸುಖಪಡಿಸು.

ಶ್ಲೋ. ವ್ಯಥಯತಿವೃಥಾಮೌನಂತನ್ವಿಪ್ರಪಂಚಯಪಂಚಮಂತರುಣಿಮಧುರಾಲಾಪೈಸ್ತಾಪಂವಿನೋದಯದೃಷ್ಟಿಭಿಃಸುಮುಖಿವಿಮುಖೀಭಾವಂವಿಮುಂಚನಮುಂಚಮಾಂಸ್ವಯಮತಿಶಯಸ್ನಿಗ್ಧೋಮುಗ್ಧೆಪ್ರಿಯೋಯಮುಪಸ್ಥಿತಃ॥

ಟೀ. ಹೆತನ್ವಿ – ಎಲೈರಾಧೆಯೆ, ವೃಥಾ – ವ್ಯರ್ಥವಾದ, ಮೌನಂ – ಅಸಂಭಾಷಣವು, ವ್ಯಥಯತಿ — ದುಃಖಪಡಿಸುತ್ತಲಿದೆ, ಹೆತರುಣಿ — ಎಲೈ ಯುವತಿಯೆ, ಮಧುರಾಲಾಪೈಃ, ಮಧುರ — ಮನೋಹರವಾದ, ಆಲಾಪೈಃ — ಸಲ್ಲಾಪಗಳಿಂದ, ಪಂಚಮಂ — ಪಂಚಮಸ್ವರವನ್ನು, ಪ್ರಪಂಚಯ – ವಿಸ್ತರಿಸು, ದೃಷ್ಟಿಭಿಃ – ಕಟಾಕ್ಷಗಳಿಂದ, ತಾಪಂ – ಸಂತಾಪವನ್ನು, ವಿನೋದಯ – ಹೋಗಲಾಡಿಸು, ಹೇಸುಮುಖಿ – ಎಲೈಶೋಭನವಾದಮುಖವುಳ್ಳವಳೆ, ವಿಮುಖೀಭಾವಂ — ಪರಾಙ್ಮುಖತ್ವವನ್ನು, ವಿಮುಂಚ — ಬಿಡು, ಮಾಂ – ನನ್ನನ್ನು, ನಮುಂಚ – ಬಿಡಬ್ಯಾಡ, ಹೆಮುಗ್ಧೆ – ಎಲೈಮೂಢಳೆ, ಅಯಂಪ್ರಿಯಃ — ಈನಾಯಕನು, ಅತಿಶಯಸ್ನಿಗ್ಧಃ – ಅತ್ಯಧಿಕಪ್ರೇಮವುಳ್ಳವನಾಗಿ, ಸ್ವಯಂ — ತಾನೆ, ಉಪಸ್ಥಿತಃ — ಸಮೀಪವಂ ಹೊಂದಿಇಧಾನೆ,

ತಾ. ಎಲೈ ರಾಧೆಯೆ ಅತ್ಯನುರಾಗದಿಂತಾನೆ ಬಂದಿರುವ ನನ್ನೊಳು ಕಟಾಕ್ಷವನ್ನಿಟ್ಟು ಅಭಿಮುಖಳಾಗಿ ಮಧುರವಚನಗಳನ್ನಾಡುವಳಾಗು.

ಶ್ಲೋ. ಮುಗ್ಧೆವಿಧೇಹಿಮಯಿನಿರ್ದಯದಂತದಂಶದೋರ್ವಲ್ಲಿಬಂಧನಿಬಿಡಸ್ತನಪೀಡನಾನಿ ಚಂಡಿತ್ವಮೇವಮುದಮಂಚನಪಂಚಬಾಣಚಾಂಡಾಲಕಾಂಡದಲನಾದಸವಃಪ್ರಯಾಂತು.

ಟೀ. ಹೇಮುಗ್ಧೆ – ಎಲೈಮುಗ್ಧಳಾದ ರಾಧೆಯೆ, ಮಯಿ – ನನ್ನಲ್ಲಿ, ನಿರ್ದಯ – ಕರುಣೆಇಲ್ಲದೆಇರೋಣಹ್ಯಾಗೋಹಾಗೆ, ದಂತ – ಪಲ್ಗಳಿಂದ, ದಂಶ – ಕಚ್ಚೋಣವಂ, ದೋರ್ವಲ್ಲಿ – ಬಳ್ಳಿಯಂತಿರುವಬಾಹುಗಳಿಂ-- ಬಂಧ – ಬಿಗಿಯೋಣವಂ, ನಿಬಿಡ – ಎಡಬಿಡದಿರುವ, ಸ್ತನ – ಕುಚಗಳಿಂದ, ಪೀಡನಾನಿ – ಪೀಡನೆಗಳಂಕೂಡ, ವಿಧೇಹಿ – ಮಾಡು, ಹೇ ಚಂಡಿ– ಎಲೈಕೋಪವುಳ್ಳವಳೆ, ತ್ವಮೇವ – ನೀನೆ, ಮುದಂ – ಆನಂದವನ್ನು, ಅಂಚ – ಹೊಂದು, ಅಸವಃ – ಪ್ರಾಣಗಳು, ಪಂಚಬಾಣ -- ಮನ್ಮಥನೆಂಬ, ಚಂಡಾಲ – ನೀಚನ, ಕಾಂಡ – ಬಾಣಗಳ, ದಳನಾತ್ -- ಸೀಳೋಣವದೆಸೆಯಿಂದ, ನಪ್ರಯಾಂತು — ಹೋಗಬೇಡಾ.

ತಾ. ಎಲೈ ರಾಧೆಯೆ ಆ ಚಂಡಾಲನಾದ ಮದನನಬಾಣದಪೆಟ್ಟಿನಿಂ ಪ್ರಾಣಗಳು ಪೋಗುವದಕ್ಕಿಂತಲೂ ಇನ್ನು ತೋಳುಗಳಿಂ ನನ್ನಂಬಿಗಿದುದಂತಂಗಳಿಂಕಚ್ಚಿ ಕುಚಂಗಳಿಂಮರ್ದಿಸಿ ನೀನೆ ಸಂತೋಷಪಡುವಳಾಗು.

ಶ್ಲೋ. ಬಂಧೂಕದ್ಯುತಿಬಾಂಧವೋಯಮಧರಃಸ್ನಿಗ್ಧೋ ಮಧೂಕಚ್ಛವಿಃ ಗಂಡಶ್ಚಂಡಿಚಕಾಸ್ತಿನೀಲನಳಿನಶ್ರೀಮೋಚನಂ ಲೋಚನಂನಾಸಾನ್ವೇತಿತಿಲಪ್ರಸೂನಪದವೀಂಕುಂದಾಭದಂತಿಪ್ರಿಯೆ ಪ್ರಾಯಸ್ತ್ವನ್ಮುಖಸೇವಯಾ ವಿಜಯತೆವಿಶ್ವಂಸಪುಷ್ಪಾಯುಧಃ॥

ಟೀ. ಹೇಚಂಡಿ – ಎಲೈರಾಧೆಯೆ, ಅಯಮಧರಃ– ಈ ತುಟಿಯು, ಬಂಧೂಕದ್ಯುತಿಬಾಂಧವಃ, ಬಂಧೂಕ --- ಬಂದುಗೆ ಪುಷ್ಪದ, ದ್ಯುತಿ -- ಕಾಂತಿಗೆ, ಬಾಂಧವಃ – ಬಂಧುವಾದುದು, ಗಂಡೆ – ಕಪೋಲದಲ್ಲಿ, ಸ್ನಿಗ್ಧ – ನುಣುಪಾದ, ಮಧೂಕಚ್ಛವಿಃ, ಮಧೂಕ -- ಹಿಪ್ಪೆಹೂವಿನ, ಛವಿಃ – ಕಾಂತಿಯು, ಚಕಾಸ್ತಿ – ಪ್ರಕಾಶಿಸುತ್ತಲಿಧೆ, ಲೋಚನಂ – ನೇತ್ರವೂ, ನೀಲನಳಿನಶ್ರೀಮೋಚನಂ, ನೀಲನಳಿನ – ನೀಲೋತ್ಪಲದ, ಶ್ರೀ – ಕಾಂತಿಯನ್ನು, ಮೋಚನಂ – ಬಿಡಿಸುತಲಿರುವದು, ನಾಸಾ – ನಾಸಿಕೆಯು, ತಿಲಪ್ರಸೂನಪದವೀಂ, ತಿಲಪ್ರಸೂನ – ಯೆಳ್ಳಗಸೆಪುಷ್ಪದ, ಪದವೀಂ -- ಮಾರ್ಗವನ್ನು, ಅನ್ವೇತಿ – ಅನುಸರಿಸುತಲಿಧೆ, ಕುಂದಾಭದಂತೆ, ಕುಂದ– ಮೊಲ್ಲೆಮೊಗ್ಗುಗಳ, ಆಭ – ಕಾಂತಿಯಂತೆಕಾಂತಿಯುಳ್ಳ, ದಂತೆ – ಪಲ್ಗಳುಳ್ಳ, ಹೆಪ್ರಿಯೆ– ಎಲೈಕಾಂತೆಯೆ, ಪ್ರಾಯಃ – ಬಹುತರವಾಗಿ, ಪುಷ್ಪಾಯುಧಃ, ಪುಷ್ಪಂಗಳಬಾಣವಾಗಿಯುಳ್ಳ, ಸಃ– ಆಮನ್ಮಥನು, ತ್ವನ್ಮುಖಸೇವಯಾ – ತ್ವತ್– ನಿನ್ನ, ಮುಖ -- ಮೊಗದ, ಸೇವಯಾ– ಆಶ್ರಯದಿಂದ, ವಿಶ್ವಂ – ಪ್ರಪಂಚವನ್ನು, ವಿಜಯತೆ – ಜೈಸುತಲಿಧಾನೆ.

ತಾ. ಎಲೈರಾಧೆಯೆ- ನಿನ್ನ ಸಂಬಂಧಿಯಾದ ಶೆಂದುಟಿಯಂ ಸ್ವಾದ್ವಾದಕೆನ್ನೆಗಳಂ ಯೆಸಳ್‌ನೊಸಳಂ ಕಪ್ಪಾದಕಣ್ಣಿಗಳಂ ಮೊಲ್ಲೆಯಮೊಗ್ಗೆಗಳಂ ಬಗ್ಗಿಸುವಪಲ್ವರಶೆಗಳಂ ಮೂಲೋಕಮಂಮೋಹಗೊಳಿಸುವೆವು.

ಶ್ಲೋ. ದೃಶೌತವಮದಾಲಸೆವದನಮಿಂದುಮತ್ಯುಜ್ವಲಂಗತಿರ್ಜನಮನೋರಮವಿಧೂತರಂಭಮೂರುದ್ವಯಂರತಿಸ್ತವಕಳಾವತೀರುಚಿರಚಿತ್ರರೇಖೇಭ್ರುವಾವಹೊವಿಬುಧಯೌವತಂವಹಸಿತನ್ವಿಪೃಥ್ವೀಂಗತಾ॥

ಇತೀ ಶ್ರೀ ಕೃಷ್ಣದಾಸ ಜಯದೇವ ಕೃತೌ ಗೀತಗೋವಿಂದೇ
ದಶಮಸ್ಸರ್ಗಃ.

ಟೀ. ಹೆತನ್ವಿ - ಎಲೈರಾಧೆಯೆ, ತವ - ನಿನ್ನ, ದೃಶೌ -- ನೇತ್ರಗಳು, ಮದಾಲಸೆ -- ಮದ - ಸೊಕ್ಕಿನಿಂದ, ಅಲಸೆ - ಜಡಂಗಳಾದುದು, ವದನಂ - ಮುಖವು, ಇಂದು - ಚಂದ್ರನನ್ನು. ಅತ್ಯುಜ್ವಲಂ - ಅತಿಕ್ರಮಿಶಿ ಪ್ರಕಾಶಿಸುತಲಿರುವದು, ಗತಿಃ -- ನಡಗೆಯು, ಜನಮನೋರಮಾ -- ಜನಗಳಿಗೆ ಮನೋಹರವಾದುದು, ಊರುದ್ವಯಂ, ಊರು -- ತೊಡೆಗಳ, ದ್ವಯಂ --- ಯುಗ್ಮವು, ವಿಧೂತರಂಭಂ, ವಿಧೂತ --- ತಿರಸ್ಕರಿಸಲ್ಪಟ್ಟ, ರಂಭಂ -- ಕದಳೀಸ್ತಂಭವುಳ್ಳದ್ದು, ತವ -- ನಿನ್ನ, ರತಿಃ -- ಸುರತವು, ಕಳಾವತಿ - ಶೃಂಗಾರಕಳೆಗಳುಳ್ಳದ್ದು, ಭ್ರುವೌ -- ಹುಬ್ಬುಗಳು, ರುಚಿರಚಿತ್ರರೇಖೆ, ರುಚಿರ - ಮನೋಹರವಾದ, ಚಿತ್ರ -ಆಶ್ಚರ್ಯಕರವಾದ, ರೇಖೆ - ರೇಖೆಗಳುಳ್ಳದ್ದು, ಪೃಥ್ವೀಂ -- ಭೂಮಿಯನ್ನು, ಗತಾ-ಹೊಂದಿದ, ತ್ವಂ-ನೀನು, ವಿಬುಧಯೌವತಂ-ಅಪ್ಸರಸ್ತ್ರೀರುಗಳಸಮೂಹವನ್ನು, ವಹಸಿ-ಧರಿಸುತಲಿಧೀಯೆ, ಅಹೊ-ಆಶ್ಚರ್ಯವು.

ತಾ. ಮದಾಲಸಾ ಇಂದುಮತಿ ಮನೋರಮಾ ರಂಭಾ ಕಳಾವತಿ ಚಿತ್ರಲೇಖೆ ಯಿವಾಪರಿಪೆಸರುಳ್ಳ ಅಪ್ಸರಸ್ತ್ರೀರುಗಳ ಸಮೂಹಮಂ ನಿನ್ನ ಅವಯವಂಗಳೊಳ್ ವಹಿಸುತಲಿಧೀಯೆ ಮತ್ತಮಿವರುಗಳಲ್ಲಿ ಹಿರೊರ್ವರಲ್ಲಿರುವಬಂದೊಂದು ಅತಿಶಯವಾದ ಸೌಂದರ್ಯಗುಣಂಗಳೆಲ್ಲವಂ ನೀನೊರ್ವಳೆ ವಹಿಸಿರುವದರಿಂ ನಿನ್ನಂತಿರ್ಪ ಕಾಮಿನಿಯು ಸ್ವರ್ಗದೊಳಿಲ್ಲದ ದುರ್ಲಭಳೆಂದೆಣಿಸುತಲಿರ್ಪೇನೆ.

ಶ್ಲೋ. ಸುಚಿರಮನುನಯೇನಪ್ರೀಣಯಿತ್ವಾ ಮೃಗಾಕ್ಷೀಂಗತವತಿಕೃತವೇಷಕೇಶವೇಕುಂಜಶಯ್ಯಾಂ॥ ರಚಿತರುಚಿರಭೂಷಾದೃಷ್ಟಿಮೋಚೆಪ್ರದೊಷೆಸ್ಫುರತಿನಿರವಸಾದಾಂಕಾಪಿರಾಧಾಂಜಗಾದ॥

ಟೀ. ಮೃಗಾಕ್ಷೀಂ -- ರಾಧೆಯನ್ನು, ಸುಚಿರಂ -- ಬಹುಕಾಲಪ

ಲ್ಯಂತೇ ವೃ, ಅನುನಯೈನ – ಸಮಾಧಾನವಾಕ್ಯಗಳಿಂ, ಪ್ರೀಣಯಿತ್ವಾ- ಸಂತೋಷಪಡಿಸಿ, ಕೃತವೇಷೆ, ಕೃತ – ಮಾಡಲ್ಪಟ್ಟ, ವೇಷ — ಅಲಂಕಾರವುಳ್ಳ, ಕೇಶವೇ - ಶ್ರೀಕೃಷ್ಣನು, ಕುಂಜಶಯ್ಯಾಂ, ಕುಂಜ - ಪೊದೆಯೊಳಿರುವ, ಶಯ್ಯಾಂ— ಹಾಸಿಗೆಯನ್ನು, ಗತವತಿಸತಿ — ಹೊಂದುತ್ತಿರಲಾಗಿ, ನಿರವಸಾದಾಂ — ಮನಸ್ಸಿನಕೊರತೆಯಿಲ್ಲದ; ರಾಧಾಂ – ರಾಧೆಯನ್ನು, ದೃಷ್ಟಿಮೋಷೆ, ದೃಷ್ಟಿ — ನೋಟವನ್ನು, ಮೋಷೆ — ಅಪಹರಿಸುತಲಿರುವ, ಪ್ರದೋಷೆ — ಸಂಧ್ಯಾಕಾಲವು: ಸ್ಫುರತಿಸತಿ — ಪ್ರಕಾಶಿಸುತ್ತಿರಲಾಗಿ, ಕಾಪಿ —- ಓರ್ವಕೆಳದಿಯು, ರಚಿತರುಚಿರಭೂಷಾಸತಿ, ರಚಿತ — ಮಾಡಲ್ಪಟ್ಟ ರುಚಿರ —ಮನೋಹರವಾದ, ಭೂಷಾಸತಿ — ಅಲಂಕಾರವುಳ್ಳವಳಾಗಿ, ಜಗಾದ – ನುಡಿದಳು.

ತಾ. ಶ್ರೀಕೃಷ್ಣನು ಮೃದುವಾದ ನುಡಿಗಳಿಂದ ರಾಧೆಯಂ ಸಮಾಧಾನಗೊಳಿಸಿ ಪೊದರಿನೊಳ್ ಪಲ್ಲವಶಯನವಂ ಹೊಂದುತಿರಲಾಗಿ ಓರ್ವಸಖಿಯು ರಾಧಾದೇವಿಯಂ ಮಣಿಭೂಷಣಗಳಿಂದಲಂಕರಿಸಿ ಪ್ರದೋಷಕಾಲದೊಳಿಂತೆಂದಳು.

ವಿಂಶಾಷ್ಟಪದೀಪ್ರಾರಂಭಃ, ರಾಗ—ಮೋಹನವಸಂತ.

ವಿರಚಿತಚಾಟುವಚನರಚನಂಚರಣೆರಚಿತಪ್ರಣಿಪಾತಂ। ಸಂಪ್ರತಿಮಂಜುಳವಂಜುಳಸೀಮನಿಕೇಳೀಶಯನಮನುಪಯಾತಂ ॥ ಮುಗ್ಧೆ ಮಧುಮಥನಮನುಗತಮನುಸರರಾಧೆಮುಗ್ಧೆ ಮಧುಮಥನಂ॥

ಟೀ. ಮುಗ್ಧೆ-ಮೂಢೆಯಾದ, ಹೇರಾಧೆ - ಎಲೈರಾಧೆಯೆ, ವಿರಚಿತ - ಮಾಡಲ್ಪಟ್ಟ, ಚಾಟುವಚನ - ಪ್ರಿಯನುಡಿಗಳ, ರಚನಂ-ಚಮತ್ಕಾರವುಳ್ಳ, ಚರಣೆ - ಪಾದದಲ್ಲಿ, ರಚಿತ - ಮಾಡಲ್ಪಟ್ಟ, ಪ್ರಣಿಪಾತಂ- ನಮಸ್ಕಾರವುಳ್ಳ, ಸಂಪ್ರತಿ- ಯೀಗ, ಮಂಜುಳ-ಮನೋಹರವಾದ, ವಂಜುಳ-ವಕುಳವೃಕ್ಷದ, ಸೀಮನಿ - ತಳದಲ್ಲಿ, ಕೇಳಿಶಯನಂ- ಸುರತತಲ್ಪವನ್ನು, ಉಪಯಾತಂ - ಹೊಂದಿರುವ, ಅನುಗತಂ - ಅನುಸರಿಸಿಬಂದ, ಮಧುಮಥನಂ-ಶ್ರೀಕೃಷ್ಣನನ್ನು, ಅನುಸರ-ಅನುಸರಿಸು.

ಘನಜಘನಸ್ತನಭಾರಭರೇದರಮಂಥರಚರಣವಿಹಾರಂ। ಮುಖರಿತಮಣಿಮಂಜೀರಮುಪೈಹಿವಿಧೇಹಿಮರಾಳವಿಕಾರಂ॥ ಮುಗ್ಧೆ ಮಧುಮಥನಂ॥

ಟೀ. ಘನಜಘನಸ್ತನಭಾರಭರೇ, ಘನ-ದಟ್ಟವಾದ, ಜಘನ- ಕಟಿಪುರೋಭಾಗವೇನು, ಸ್ತನಭಾರ-ಕುಚಭಾರವೇನು ಇವುಗಳಂ, ಭರೆ-ಧರಿಸಿಕೊಂಡಿರುವ, ಹೇಮುಗ್ಧೆ —ಎಲೈರಾಧೆಯೆ, ದರಮಂಥರಚರಣವಿ

ಭಾರಂಯಥಾತಥಾ, ದರ-ಸ್ವಲ್ಪವಾಗಿ, ಮಂದರ- ಅಲಸವಾದ, ಚರಣ-- ಪಾದಗಳ, ವಿಹಾರಂ - ಸಂಚಾರವುಳ್ಳೋಳು ಹ್ಯಾಗೋ ಹಾಗೆ, ಮುಖರಿತ ಮಣಿಮಂಜೀರಂ - ಮುಖರಿತ - ಧ್ವನಿಮಾಡಿಸಲ್ಪಟ್ಟ, ಮಣಿ -- ರತ್ನಗಳ, ಮಂಜೀರಂ --- ಕಟಕವುಳ್ಳೋಳು ಹ್ಯಾಗೋ ಹಾಗೆ, ಮಧುಮಥನಂ --- ಶ್ರೀಕೃಷ್ಣನನ್ನು, ಉಪೇಹಿ -- ಹೊಂದು, ಮರಾಳವಿಕಾರಂ, ಮರಾಳ- ಹಂಸಪಕ್ಷಿಯ, ವಿಕಾರಂ - ಚೇಷ್ಟೆಯನ್ನು, ವಿಧೇಹಿ - ಮಾಡು.

ಶೃಣುರಮಣೀಯತರಂತರುಣೀಜನಮೋಹನಮಧುಪವಿರಾವಂ । ಕುಸು
ಮಶರಾಸನವಂದಿನಿಪಿಕನಿಕರೇಭಜಭಾವಂ॥ಮುಗ್ಧೆಮಧುಮಥನಂ॥ ॥೩॥

ಟೀ. ಮುಗ್ಧೆ -- ಎಲೈ ರಾಧೆಯೆ, ರಮಣೀಯತರಂ -- ಅತಿಮನೋಹರವಾದ, ತರುಣೀಜನಮೋಹನಮಧುಪವಿರಾವಂ, ತರುಣೀಜನ - ಯುವತಿಜನಗಳಿಗೆ, ಮೋಹನ - ಮೋಹಕರವಾದ, ಮಧುಪ -- ತುಂಬಿಗಳ, ವಿರಾವಂ -- ಝುಂಕಾರವನ್ನು, ಶೃಣು --- ಕೇಳು, ಕುಸುಮಶರಾಸನವಂದಿನಿ, ಕುಸುಮಶರಾಸನ -- ಮನ್ಮಥನನ್ನು, ವಂದಿನಿ --- ಪೊಗಳುತಲಿರುವ, ಪಿಕನಿಕರೆ - ಕೋಗಿಲೆಯಗುಂಪಿನೊಳ್, ಭಾವಂ -- ಅಭಿಪ್ರಾಯವನ್ನು, ಭಜ -- ಹೊಂದು.

ಅನಿಲತರಳಕಿಸಲಯನಿಕರೇಣಕರೇಣಲತಾನಿಕುರುಂಬಂ। ಪ್ರೇರಣಮಿವಕರ
ಭೋರುಕರೋತಿಗತಿಂಪ್ರತಿಮುಂಚವಿಳಂಬಂ॥ಮುಗ್ಧೆಮಧುಮಥನಂ. ॥೪॥

ಟೀ ಹೇಕರಭೋರು - ಎಲೈ ಕರಭದಂತಿರುವ ತೊಡೆಗಳುಳ್ಳ ರಾಧೆಯೆ, ಲತಾನಿಕುರುಂಬಂ, ಲತಾ -- ಬಳ್ಳಿಗಳ, ನಿಕುರುಂಬಂ -- ಸಮೂಹವು, ಅನಿಲತರಳಕಿಸಲಯನಿಕರೇಣ, ಅನಿಲ -- ಘಾಳಿಯಿಂದ, ತರಳ -- ಚಂಚಲವಾದ, ಕಿಸಲಯ --- ತಳಿಗಳ, ನಿಕರೇಣ --- ಸಮೂಹವೆಂಬ, ಕರೇಣ - ಹಸ್ತದಿಂದ, ಗತಿಂಪ್ರತಿ -- ಗಮನವನ್ನು ಕುರಿತು, ಪ್ರೇರಣಂ- ಪ್ರೇರಿಸೋಣವನ್ನು, ಕರೋತೀವ -- ಮಾಡುತಲಿದೆಯೋ ಯೆಂಬಹಾಗೆಯಿದೆ, ವಿಲಂಬಂ-ಸಾವಕಾಶವನ್ನು, ಮುಂಚ- ಬಿಡು.

ಸ್ಫುರಿತಮನಂಗತರಂಗವಶಾದಿವಸೂಚಿತಹರಿಪರಿರಂಭಂ॥ ಪೃಚ್ಛಮನೋ
ಹರಹಾರವಿಮಲಜಲಧಾರಮಮುಂಕುಚಕುಂಭಂ॥ಮುಗ್ಧೆಮಧುಮಥನಂ॥೫॥

ಟೀ. ಹೇಮುಗ್ಧೆ - ಎಲೈರಾಧೆಯೆ, ಅನಂಗತರಂಗವಶಾತ್ - ಅನಂಗ - ಮದನನ, ತರಂಗವಶಾತ್ -- ಅಭಿವೃದ್ಧಿಯುದೆಸೆಯಿಂದ, ಸೂಚಿತಹರಿಪರಿರಂಭಮಿವ, ಸೂಚಿತ-ಸೂಚಿಸಲ್ಪಟ್ಟ, ಹರಿ- ಶ್ರೀಕೃಷ್ಣನ, ಪರಿರಂಭಮಿವ -- ಆಲಿಂಗನವುಳ್ಳದ್ದೋಯೆಂಬಂತೆ, ಸ್ಫುರಿತಂ -- ಪ್ರಕಾಶಿಸುತಲಿ

ರುವ, ಮನೋಹರಹಾರವಿಮಲಜಲಧಾರಂ, ಮನೋಹರ --- ಚೆಲುವಾದ, ಹಾರ -- ಮುಕ್ತಾಹಾರವೆಂಬ, ವಿಮಲ -- ನಿರ್ಮಲವಾದ, ಜಲಧಾರಂ -- ಉದಕಪ್ರವಾಹವುಳ್ಳ, ಅಮುಂ -- ಈ, ಕುಚಕುಂಭಂ, ಕುಚ -ಸ್ತನಗಳೆಂಬ, ಕುಂಭಂ -- ಕಲಶವನ್ನು, ಪೃಚ್ಛ -ಕೇಳು.

ಅಧಿಗತಮಖಿಲಸಖೀಭಿರಿದಂ ತವವಪುರಪಿ ರತಿರಣಸಜ್ಜಂ|ಚಂಡಿರಸಿತರಶ
ನಾರವಡಿಂಡಿಮಮಭಿಸರಸರಸಮಲಜ್ಜಂ॥ ಮು ... ॥೬॥

ಟೀ॥ ಹೇಚಂಡಿ -- ಎಲೈರಾಧೆಯೆ, ಅಖಿಲಸಖೀಭಿಃ, ಅಖಿಲ - ಸಮಸ್ತರಾದ, ಸಖೀಭಿಃ -- ಕೆಳದೀರುಗಳಿಂದ, ಅಧಿಗತಂ - ವ್ಯಾಪ್ತವಾದ, ರಸಿತರಶನಾರವಡಿಂಡಿಮಂ ರಸಿತ - ಧ್ವನಿಗೈಯುವ, ರಶನಾ -- ವಡ್ಯಾಣದ, ರವ - ಶಬ್ದವೆಂಬ, ಡಿಂಡಿಮಂ - ಡಂಗುರವುಳ್ಳ, ಅಭಿಸರಸರಸಂ,ಅಭಿಸರ - ಅನುಸರಣೆಯಲ್ಲಿ, ಸೇನೆಯೊಡನೆ ಪೋಗೋಣದರಲ್ಲಿ, ಸರಸಂ - ಅಭಿಲಾಷೆಯೊಡಗೂಡಿರುವ, ತವ - ನಿನ್ನ, ಇದಂ ವಪುಃ - ಈ ಶರೀರವು, ಅಲಜ್ಜಂ ಯಥಾತಥಾ - ನಾಚಿಕೆಇಲ್ಲದೆ ಇರೋಣ ಹ್ಯಾಗೋಹಾಗೆ, ರತಿರಣಸಜ್ಜಂ, ರತಿ-ಸುರತವೆಂಬ, ರಣ-ಯುದ್ಧದಲ್ಲಿ, ಸಜ್ಜಂ-ಸನ್ನದ್ಧವಾಗಿಧೆ.

ಸ್ಮರಶರಸುಭಗನಖೇನಸಖೀಮವಲಂಬ್ಯ ಕರೇಣ ಸಲೀಲಂ॥ಚಲವಲಯಕ್ವ
ಣಿತೈರವಬೋಧಯ ಹರಿಮಪಿ ನಿಜಗತಿಶೀಲಂ॥ ... ... ॥೭॥

ಟೀ॥ ಸ್ಮರಶರಸುಭಗನಖೇನ, ಸ್ಮರ -- ಮನ್ಮಥನ, ಶರ -- ಬಾಣದಂತೆ, ಸುಭಗ -- ಮನೋಹರವಾದ, ನಖೇನ --- ಉಗುರುಗಳುಳ್ಳ, ಕರೇಣ - ಹಸ್ತದಿಂದ, ಸಖೀಂ - ಸ್ನೇಹಿತೆಯನ್ನು, ಅವಲಂಬ್ಯ-ಆಶ್ರಯಿಸಿ, ಸಲೀಲಂ - ವಿಲಾಸದೊಡಗೂಡಿರೋಣ ಹ್ಯಾಗೋಹಾಗೆ, ಚಲ-- ಪ್ರೋಗಮಡು, ವಲಯಕ್ವಣಿತೈಃ, ವಲಯ -- ಪಾದಕಟಕದ, ಕ್ವಣಿತೈಃ - ಧ್ವನಿಗಳಿಂದ, ಹರಿಮಪಿ-ಶ್ರೀಕೃಷ್ಣನನ್ನು ಕೂಡ, ನಿಜಗತಿಶೀಲಂ, ನಿಜ --- ಸ್ವಕೀಯ್ಯವಾದ, ಗತಿ - ಗಮನವೇ, ಶೀಲಂ -- ಸ್ವಭಾವವಾಗಿಉಳ್ಳವನನ್ನಾಗಿ, ಅವಬೋಧಯ-ಎಚ್ಚರಿಸು.

ಶ್ರೀಜಯದೇವಭಣಿತಮಧರೀಕೃತಹಾರಮುದಾಸಿತವಾಮಂ॥ ಹರಿವಿನಿಹಿತ
ಮನಸಾಮಧಿತಿಷ್ಠತು ಕಂಠತಟೀಮವಿರಾಮಂ॥ ... ॥೮॥

ಟೀ॥ ಅಧರೀಕೃತಹಾರಂ, ಅಧರೀಕೃತ--- ತಿರಸ್ಕರಿಸಲ್ಪಟ್ಟ, ಹಾರಂ --- ಮುಕ್ತಾಹಾರವುಳ್ಳ, ಉದಾಸಿತವಾಮಂ, ಉದಾಸಿತ -- ಉದಾಸೀನಮಾಡಲ್ಪಟ್ಟ, ವಾಮಂ -- ವಕ್ರತೆಯುಳ್ಳ, ಶ್ರೀಜಯದೇವಭಣಿತಂ, ಶ್ರೀಜಯದೇವ --- ಜಯದೇವಕವಿಯ, ಭಣಿತಂ --- ವಾಕ್ಯ

ವು, ಹರಿವಿನಿಹಿತಮಾನಸಾಂ, ಹರಿ -- ಶ್ರೀಕೃಷ್ಣನಲ್ಲಿ, ವಿನಿಹಿತ -- ಇರಿಸಲ್ಪಟ್ಟ, ಮಾನಸಾಂ -- ಮನಸ್ಸುಳ್ಳವರ, ಕಂಠಪೀಠೀಂ, ಕಂಠಪ್ರದೇಶದಲ್ಲಿ, ಅವಿರಾಮಂ - ಶಾಶ್ವತವಾಗಿ, ಅಧಿತಿಷ್ಠತು, ವಾಸಮಾಡಲಿ.

ತಾ. ಎಲ್ಲೈ ರಾಧೆಯೆ ಪ್ರಿಯವಚನಗಳಂ ನುಡಿಯುತ ನಿನ್ನಡಿಗಳಿಗಿಳಿದು ಅನುಸರಿಸಿಬಂದು ಪಲ್ಲವೀಯನದೊಳ್ ತಲ್ಲಣಿಸುವ ಮಲ್ಲವೈರಿಯುಂ ಕುರಿತು ಮೆಲ್ಲಮೆಲ್ಲನೆ ಚರಣವಲಯವಂ ಝಲ್ಲೆನಿಸುತ ಮಣಿಭೂಷಣಂಗಳಿಂದಲಂಕೃತಳಾಗಿ ತೆರಳುವಳಾಗೆಂದು ಕೆಳದಿಯು ನುಡಿದಳು.

ಶ್ಲೋ. ಅಕ್ಷ್ಣೋರ್ನಿಕ್ಷಿಪದಂಜನಂಶ್ರವಣಯೋಸ್ತಾಪಿಂಛಗುಚ್ಛಾವಳಿಂ
ಮೂರ್ಧ್ನಿಶ್ಯಾಮಸರೋಜದಾಮಕುಚಯೋಃಕಸ್ತೂರಿಕಾಪತ್ರಕಂ ॥ ಧೂ
ರ್ತಾನಾಮಭಿಸಾರಸತ್ವರಹೃದಾಂವಿಷ್ವಙ್ನಿಕುಂಜೇಸಖಿಧ್ವಾಂತಂ ನೀಲನಿಚೋ
ಳಚಾರುಸುದೃಶಾಂಪ್ರತ್ಯಂಗಮಾಲಿಂಗತಿ ॥

ಟೀ. ಹೇಸಖಿ-ಎಲ್ಲೈರಾಧೆಯೆ, ಅಕ್ಷ್ಣೋಃ-- ಕಣ್ಣುಗಳಲ್ಲಿ, ಅಂಜನಂ- ಕಾಡಿಗೆಯುಂ, ಶ್ರವಣಯೋಃ--ಕಿವಿಗಳೊಳ್, ತಾಪಿಂಛಗುಚ್ಛಾವಳಿಂ, ತಾಪಿಂಛ-ನವಿಲ್ಗರಿಗಳ, ಗುಚ್ಛ- ಗೊಂಚಲುಗಳ, ಆವಳಿಂ --- ಪಙ್ಕ್ತಿಯುಂ, ಮೂರ್ಧ್ನಿ -- ಶಿರಸ್ಸಿನೊಳ್, ಶ್ಯಾಮಸರೋಜದಾಮ, ಶ್ಯಾಮಸರೋಜ - ನೀಲೋತ್ಪಲಗಳ, ದಾಮ--ಮಾಲಿಕೆಯುಂ, ಕುಚಯೋಃ--ಸ್ತನಗಳೊಳ್, ಕಸ್ತೂರಿಕಾಪತ್ರಕಂ, ಕಸ್ತೂರಿಕಾ- ಕಸ್ತೂರಿಯ, ಪತ್ರಕಂ - ಮಕರಿಕಾಪತ್ರವಂ, ನಿಕ್ಷಿಪತ್-ಅಲಂಕರಿಸುತಲಿರುವ, ನೀಲನಿಚೋಳಚಾರು, ನೀಲನಿಚೋಳ-ಕರಿಯಮುಸುಕಿನಂತೆ, ಚಾರು -- ಮನೋಹರವಾದ, ಧ್ವಾಂತಂ--ಕಗ್ಗತ್ತಲೆಯು, ನಿಕುಂಜೆ -- ಲತಾಗೃಹದಲ್ಲಿ, ವಿಷ್ವಕ್ - ನಾಲ್ಕುಪಾರ್ಶ್ವದಲ್ಲು, ಅಭಿಸಾರಸತ್ವರಹೃದಾಂ, ಅಭಿಸಾರ -- ಸಂಕೇತಸ್ಥಾನದಲ್ಲಿ, ಸತ್ವರ-ವೇಗದಿಂಕೂಡಿದ, ಹೃದಾಂ - ಮನಸ್ಸುಳ್ಳ, ಧೂರ್ತಾನಾಂ-ವಂಚಕರಾದ, ಸುದೃಶಾಂ - ಸ್ತ್ರೀಯರುಗಳ, ಪ್ರತ್ಯಂಗಂ -- ಪ್ರತಿಶರೀರದಲ್ಲು, ಆಲಿಂಗತಿ-ಅಪ್ಪಿಕೊಳ್ಳುತ್ತಲಿದೆ.

ತಾ. ಎಲ್ಲೈರಾಧೆಯೆ ತಮ್ಮತಮ್ಮ ಪತಿಗಳಂ ವಂಚಿಸಿ ಪಂಚಶರನ ಬಾಧೆಯಿಂ ಸಂಕೇತಸ್ಥಳವಂಕುರಿತು ಪೋಗುವ ಜಾರಸ್ತ್ರೀಯರುಗಳಿಗೆ ಈ ಕಾರ್ಗತ್ತಲೆಯು ಒಂದೊಂದು ಅವಯವದೊಳೊಂದೊಂದು ವಿಧವಾದ ನೀಲಾಭರಣದಂತೆ ಕಾಣುತ ಸಕಲಶರೀರದೊಳ್ ಕವಿದುದ್ದರಿಯಂತೆ ಬಹಳ ಅನುಕೂಲವಾಗಿರುವುದು.

ಶ್ಲೋ. ಕಾಶ್ಮೀರಗೌರವಪುಷಾಮಭಿಸಾರಿಕಾಣಾಮಾಬದ್ಧರೇಖಮಭಿತೋರುಚಿಮಂಜರೀಭಿಃ । ಏತತ್ತಮಾಲದಳನೀಲತಮಂತಮಿಸ್ರಂತತ್ಪ್ರೇಮಹೇಮನಿಕಷೋಪಲತಾಂಪ್ರಯಾತಿ.

ಟೀ. ಕಾಶ್ಮೀರಗೌರವಪುಷಾಂ, ಕಾಶ್ಮೀರ --- ಕುಂಕುಮದಿಂದ ಗೌರ--ಪೊಂಬಣ್ಣವಾದ, ವಪುಷಾಂ--ಶರೀರವುಳ್ಳ, ಅಭಿಸಾರಿಕಾಣಾಂ--ಜಾರಸ್ತ್ರೀರುಗಳ, ರುಚಿಮಂಜರೀಭಿಃ, ರುಚಿ -- ಕಾಂತಿಗಳ, ಮಂಜರೀಭಿಃ -- ಗೊಂಚಲುಗಳಿಂದ, ಅಭಿತಃ -- ಸುತ್ತಲು, ಆಬದ್ಧರೇಖಂ; ಆಬದ್ಧ--ಕಟ್ಟಲ್ಪಟ್ಟ, ರೇಖಂ -- ರೇಖೆಗಳುಳ್ಳ, ತಮಾಲದಳನೀಲತಮಂ, ತಮಾಲ -- ಹೊಂಗೆಯ, ದಳ -- ಯೆಲೆಗಳಂತೆ, ನೀಲತಮಂ -- ಅತಿನೀಲವಾದ, ಏತತ್ತಮಿಸ್ರಂ -- ಈ ಕಾರ್ಗತ್ತಲೆಯು, ತತ್ಪ್ರೇಮಹೇಮನಿಕಷೋಪಲತಾಂ, ತತ್-ಆ ಜಾರಸ್ತ್ರೀರುಗಳ, ಪ್ರೇಮ-ಪ್ರೀತಿಯೆಂಬ, ಹೇಮ--ಸುವರ್ಣಕ್ಕೆ, ನಿಕಷೋಪಲತಾಂ--ವೊರೆಗಲ್ಲಿನಭಾವವನ್ನು, ಪ್ರಯಾತಿ--ಹೊಂದುತಲಿಧೆ.

ತಾ. ಈ ಕಗ್ಗತ್ತಲೆಯು ಕುಂಕುಮದಿಂದಲಂಕೃತರಾಗಿ ಪೊರಮಡುವ ಜಾರಸ್ತ್ರೀರುಗಳ ಕಾಂತಿಯಿಂ ವ್ಯಾಪ್ತವಾಗಿರುವದರಿಂ ಅವರುಗಳ ಪ್ರಿಯ ವಿಷಯವಾದ ಅನುರಾಗವೆಂಬ ಸುವರ್ಣವಂ ಪರೀಕ್ಷಿಸಲೋಸುಗಮಾಡಿರುವ ವೊರೆಗಲ್ಲೋಯೆಂಬಂತೆ ಪ್ರಕಾಶಿಸುತಲಿಧೆ.

ಶ್ಲೋ. ಹಾರಾವಳೀತರಳಕಾಂಚನಕಾಂಚಿದಾಮಮಂಜೀರಕಂಕಣಮಣಿದ್ಯುತಿದೀಪಿತಸ್ಯ । ದ್ವಾರೇನಿಕುಂಜನಿಲಯಸ್ಯಹರಿಂನಿರೀಕ್ಷ್ಯವ್ರೀಡಾವತೀಮಥಸಖೀಮಿಯಮಿತ್ಯುವಾಚ.

ಟೀ. ಅಥ--ಅನಂತರದಲ್ಲಿ, ಇಯಂ -- ಈ ಸಖಿಯು, ಹಾರಾವಳೀ--ಮುಕ್ತಾಹಾರಪಙ್ಕ್ತಿಗಳೇನು, ತರಳ -- ಪದಕವೇನು, ಕಾಂಚನ -- ಸುವರ್ಣದ, ಕಾಂಚಿದಾಮ -- ಒಡ್ಯಾಣವಪಟ್ಟಿಯೇನು, ಮಂಜೀರ -- ಕಾಲ್ಗಡಗವೇನು, ಕಂಕಣ--ಕಂಕಣವೇನು ಇವುಗಳ, ಮಣಿ -- ರತ್ನಗಳ, ದ್ಯುತಿ -- ಕಾಂತಿಯಿಂದ, ದೀಪಿತಸ್ಯ-- ಪ್ರಕಾಶಮಾಡಲ್ಪಟ್ಟ, ನಿಕುಂಜನಿಲಯಸ್ಯ, ಲತಾಗೃಹದ ದ್ವಾರೇ-- ಬಾಗಿಲಲ್ಲಿ, ಹರಿಂ --- ಶ್ರೀಕೃಷ್ಣನನ್ನು, ನಿರೀಕ್ಷ್ಯ--ನೋಡಿ, ವ್ರೀಡಾವತೀಂ, ಲಜ್ಜೆಯುಕ್ತ, ಸಖೀಂ-- ಕೆಳದಿಯಾದ ರಾಧೆಯಂ ಕುರಿತು, ಇತಿ --- ಈ ಮುಂದೆ ಹೇಳುವಪರಿಯಾಗಿ, ಉವಾಚ -- ನುಡಿದಳು. ತಾ. ಒಳ್ಳೆ ಕೆಳದಿಯು ಶ್ರೀಕೃಷ್ಣನ ಅಂಗಗಳಲ್ಲ ಸಿಂಗರಿಸಿರುವ ರತ್ನದ ವೊಡವೆಗಳ ಥಳಥಳಿಸುವ ಥಳಥಳಿ

ಸುವ ಬಳ್ಳಿಯುಮನೆಯುಬಾಗಿಲೊಳ್ ಹರಿಯುಂಕಂಡು ಲಜ್ಜೆಗೊಳುತಿರುವ ರಾಧೆಯುಂಕುರಿತು ಇಂತೆಂದಳು.

ಏಕವಿಂಶಾಷ್ಟಪದೀ ಪ್ರಾರಂಭಃ ರಾಗ. ಬಂಗಾಳವರಾಳ.

ಮಂಜುತರಕುಂಜತಲಕೇಳಿಸದನೇ| ಇಹವಿಲಸರತಿರಭಸಹಸಿತವದನೇ॥ ಪ್ರವಿಶರಾಧೆಮಾಧವಸಮೀಪಂ ಪ್ರವಿಶರಾಧೇ. ... ... ೧॥

ಟೀ. ರತಿರಭಸಹಸಿತವದನೆ, ರತಿ -- ಸುರತದ, ರಭಸ -- ವೇಗದಿಂದ, ಹಸಿತ -- ನಗೆಗೂಡಿದ, ವದನೆ-- ಮೊಗವುಳ್ಳ, ಹೇರಾಧೆ-- ಎಲೈ ರಾಧೆಯೆ, ಮಾಧವಸಮೀಪಂ- ಕೃಷ್ಣನಸಮೀಪವನ್ನು, ಪ್ರವಿಶ-ಪ್ರವೇಶಿಸು, ಇಹ -- ಈಮಂಜುತರಕುಂಜತಲಕೇಳಿಸದನೆ, ಮಂಜುತರ --- ಅತ್ಯಂತಮನೋಹರವಾದ, ಕುಂಜತಲ— ಲತಾಗೃಹಪ್ರದೇಶವೆಂಬ ಕೇಳಿಸದನೆ—ಕ್ರೀಡಾಗೃಹದಲ್ಲಿ, ವಿಲಸ-ಕ್ರೀಡಿಸು.

ನವಭವದಶೋಕದಳಶಯನಸಾರೇ| ಇಹವಿಲಸಕುಚಕಲಶತರಳಹಾರೇ॥ ಪ್ರ॥೨

ಟೀ. ಕುಚಕಲಶತರಳಹಾರೆ, ಕುಚಕಲಶ -- ಕುಂಭದಂತಿರುವಕುಚಗಳಲ್ಲಿ, ತರಳ -- ಕದಲುತಲಿರುವ, ಹಾರೆ -- ಮುಕ್ತಾಹಾರವುಳ್ಳರಾಧೆಯೆ ನವಭವದಶೋಕದಳಶಯನಸಾರೆ, ನವ -- ನೂತನವಾಗಿ, ಭವತ್-- ಉಂಟಾಗುತಲಿರುವ, ಅಶೋಕ --- ಅಗಸೆಯ, ದಳ--- ತಳಿರುಗಳ, ಶಯನೆ--ಹಾಸಿಗೆಯಿಂದ, ಸಾರೆ--ಶ್ರೇಷ್ಠವಾದ, ಇಹ--ಈ ಪೊದರಿನಲ್ಲಿ ವಿಲಸ--ಕ್ರೀಡಿಸು.

ಕುಸುಮಚಯರಚಿತಶುಚಿವಾಸಗೇಹೇ| ಇಹವಿಲಸಕುಸುಮಸುಕುಮಾರದೇಹೇ.

ಟೀ. ಕುಸುಮಸುಕುಮಾರದೇಹೆ, ಕುಸುಮ—ಪುಷ್ಪದಂತೆ, ಸುಕುಮಾರ---ಮೃದುವಾದ, ದೇಹೆ --- ಶರೀರವುಳ್ಳರಾಧೆಯೆ, ಕುಸುಮಚಯರಚಿತಶುಚಿವಾಸಗೇಹೆ, ಕುಸುಮ-- ಪುಷ್ಪಗಳ, ಚಯ -- ಸಮೂಹದಿಂದ, ರಚಿತ--ಮಾಡಲ್ಪಟ್ಟ, ಶುಚಿ--ಶುಭ್ರವಾದ, ವಾಸಗೇಹೆ -- ವಾಸಸ್ಥಾನವುಳ್ಳ, ಇಹ-ಈಲತಾಗೃಹದಲ್ಲಿ, ವಿಲಸ--ಕ್ರೀಡಿಸು.

ಚಲಮಲಯಪವನಘನಸುರಭಿಶೀತೇ| ಇಹವಿಲಸವಿಲಸದಳಿಲಲಿತಗೀತೇ॥ ಪ್ರವಿಶ

ಟೀ. ವಿಲಸದಳಿಲಲಿತಗೀತೆ, ವಿಲಸತ್ -- ಪ್ರಕಾಶಿಸುತಲಿರುವ, ಅಳಿ -- ಭ್ರಮರಗಳ, ಲಲಿತ -- ಮನೋಹರವಾದ, ಗೀತೆ -- ಗಾನದಂತಿರುವಗಾನವುಳ್ಳರಾಧೆಯೆ, ಚಲಮಲಯಪವನಘನಸುರಭಿಶೀತೆ, ಚಲ-- ಚಂಚಲವಾದ, ಮಲಯಪವನ--ತಂಘಾಳಿಯಿಂದ, ಘನ-- ಸಾಂದ್ರವಾದ ಸುರಭಿ---ಪರಿಮಳವಿಶಿಷ್ಟವಾದ, ಶೀತೆ---ಶೀತಳವಾದ, ಇಹ---ಈಕುಂ

ಜದೊಳ್, ವಿಲಸ-ಕ್ರೀಡಿಸು.

ಮಧುತರಳಪಿಕನಿಕರನಿನದಮುಖರೇ। ಇಹವಿಲಸದಶನರುಚಿರುಚಿಶಿಖರೇ॥ ಪ್ರ॥

ಟೀ. ಮಧುತರಳಪಿಕನಿಕರನಿನದಮುಖರೆ, ಮಧು - ಮಕರಂದದಿಂದ, ತರಳ--ಚಂಚಲವಾದ, ಪಿಕ--ಕೋಗಿಲೆಗಳ, ನಿಕರ--ಸಮೂಹದ, ನಿನದ-ಧ್ವನಿಗಳಿಂದ, ಮುಖರೆ-- ಶಬ್ದಾಯಮಾನವಾದ, ದಶನರುಚಿರುಚಿರಶಿಖರೆ. ದಶನ -- ಹಲ್ಲುಗಳ, ರುಚಿ--ಕಾಂತಿಯಿಂದ, ರುಚಿರ-- ಮನೋಹರವಾದ, ಶಿಖರೆ -- ಮೇಲುಭಾಗವುಳ್ಳ, ಇಹ -- ಈಪೊದರಿನಲ್ಲಿ ವಿಲಸ--ಕ್ರೀಡಿಸು.

ವಿತತಬಹುವಲ್ಲಿನವಪಲ್ಲವಘನೇ। ಇಹವಿಲಸಪೀನಕುಚಕುಂಭಜಘನೇ॥ ಪ್ರ॥

ಟೀ. ಪೀನಕುಚಕುಂಭಜಘನೆ, ಪೀನ -- ದಪ್ಪವಾದ, ಕುಚಕುಂಭ--ಸ್ತನಕಲಶಗಳೇನು, ಜಘನೆ--ಕಟಿಪುರೋಭಾಗವೇನು, ಇವುಗಳುಳ್ಳ ರಾಧೆಯೆ, ವಿತತಬಹುವಲ್ಲಿನವಪಲ್ಲವಘನೆ, ವಿತತ -- ವಿಸ್ತರಿಸಲ್ಪಟ್ಟ, ಬಹು -- ಬಹಳವಾದ, ವಲ್ಲಿ -- ಬಳ್ಳಿಗಳ, ನವ -- ನೂತನವಾದ ಪಲ್ಲವ--ತಳಿರ್ಗಳಿಂದ, ಘನೆ--ದಟ್ಟವಾದ, ಇಹ--ಈ ಸ್ಥಳದಲ್ಲಿ, ವಿಲಸ-- ಕ್ರೀಡಿಸು.

ಮಧುಮುದಿತಮಧುಪಕುಲಕಲಿತರಾವೆ। ಇಹವಿಲಸಮದನಶರರಭಸಭಾವೆ.

ಟೀ. ಮದನಶರರಭಸಭಾವೆ, ಮದನ -- ಮನ್ಮಥನ, ಶರ-- ಬಾಣದಿಂದ, ರಭಸ--ತ್ವರೆಯುಳ್ಳ, ಭಾವ--ಅಭಿಪ್ರಾಯವುಳ್ಳ, ಹೇರಾಧೆ-ಎಲೈ ರಾಧೆಯೆ, ಮಧುಮುದಿತಮಧುಪಕುಲಕಲಿತರಾವೆ, ಮಧು -- ಮಕರಂದದಿಂದ, ಮುದಿತ -- ಸಂತುಷ್ಟವಾದ, ಮಧುಪ -- ತುಂಬಿಗಳ, ಕುಲ -- ಗುಂಪಿನಿಂದ, ಕಲಿತ -- ಮಾಡಲ್ಪಟ್ಟ, ರಾವೆ -- ಧ್ವನಿಯುಳ್ಳ, ಇಹ--ಈ ಲತಾಗೃಹದಲ್ಲಿ, ವಿಲಸ-ಕ್ರೀಡಿಸು.

ವಿಹಿತಪದ್ಮಾವತೀಸುಖಸಮಾಜೆ। ಭಣತಿಜಯದೇವಕವಿರಾಜೆ ॥ ಪ್ರ॥ನಿ॥ ೮

ಟೀ. ವಿಹಿತಪದ್ಮಾವತೀಸುಖಸಮಾಜೆ, ವಿಹಿತ -- ಮಾಡಲ್ಪಟ್ಟಪದ್ಮಾವತೀ -- ಪದ್ಮಾವತಿಯೆಂಬಸ್ತ್ರೀಯ, ಸುಖಸಮಾಜೆ -- ಸೌಖ್ಯಾತಿಶಯವುಳ್ಳ, ಜಯದೇವಕವಿರಾಜೆ --- ಜಯದೇವನೆಂಬಕವಿಶ್ರೇಷ್ಠನು, ಭಣಿತಿಸತಿ--ಹೇಳುತಲಿರಲಾಗಿ, ಇಹ-- ಈ ಲತಾಗೃಹದಲ್ಲಿ, ವಿಲಸ -- ಕ್ರೀಡಿಸು. ತಾ. ಎಲೈರಾಧೆಯೆ ತಳಿರ್ಗಳ ತಲ್ಪಗಳಿಂ ತುಂಬಿ ತುಂಬಿಗಳ ಝುಂಕಾರದಿಂದಲು ಕೋಗಿಲೆಗಳ ಕೋಮಲವಾದ ಕೂಗುಗಳಿಂದ ಅತಿಮನೋಜ್ಞವಾದ ಈ ಲತಾಗೃಹದಲ್ಲಿ ಶ್ರೀಕೃಷ್ಣನೊಡಗೂಡಿ ಕ್ರೀ

ಡಿಸೊತೆಂದು ಸಖಿಯು ರಾಧೆಯಂ ಕುರಿತು ಪೇಳಿದಳು.

ಶ್ಲೋ. ತ್ವಾಂಚಿತ್ತೇನ ಚಿರಂ ವಹನ್ನಯಮತಿಶ್ರಾಂತೋಭೃಶಂತಾಪಿತಃ ಕಂದರ್ಪೇಣತುಪಾತುಮಿಚ್ಛತಿಸುಧಾಸಂಬೋಧಬಿಂಬಾಧರಂ । ಅಸ್ಯಾಂಕಂ ಸಮಲಂಕುರುಕ್ಷಣಮಿಹಭ್ರೂಕ್ಷೇಪಲಕ್ಷ್ಮೀಲವಕ್ರೀತೇದಾಸಜನೋಪ ಸೇವಿತ ಪದಾಂಭೋಜೇಕುತಸ್ಸಂಭ್ರಮಃ ॥ ೪

ಟೀ. ಹೇರಾಧೇ-- ಎಲೈರಾಧೆಯೆ, ಅಯಂತು--ಈ ಕೃಷ್ಣನಾದರೋ ತ್ವಾಂ-- ನಿನ್ನನ್ನು, ಚಿತ್ತೇನ -- ಮನಸ್ಸಿನಿಂದ, ಚಿರಂ-- ಬಹುಕಾಲವಾಗಿ ಶ್ರಾಂತಃ -- ಬಳಲಿದವನಾಗಿ, ವಹನ್- ವಹಿಸುವವನಾಗಿ, ಕಂದರ್ಪೇಣ -- ಮನ್ಮಥನಿಂದ, ಭೃಶಂ -- ಅತ್ಯಂತವಾಗಿ, ತಾಪಿತಃ -- ಸಂತಾಪಪಡಿಸಲ್ಪಟ್ಟವನಾಗಿ, ಸುಧಾಸಂಬೋಧಬಿಂಬಾಧರಂ, ಸುಧಾ --- ಅಮೃತವನ್ನು, ಸಂಬೋಧ--ಸೂಚಿಸುತಲಿರುವ, ಬಿಂಬಾಧರಂ- ತೊಂಡೆವರ್ಣನಂತಿರುವ ತುಟಿಯನ್ನು, ಪಾತುಂ -- ಪಾನಮಾಡಲೋಸುಗ, ಇಚ್ಛತಿ--ಅಪೇಕ್ಷಿಸುತಲಿಧಾನೆ, ಅಸ್ಯ -- ಈಕೃಷ್ಣನ, ಅಂಕಂ-- ಮಡಿಲನ್ನು, ಕ್ಷಣಂ-ಕ್ಷಣಕಾಲದಪರ್ಯಂತರ, ಸಮಲಂಕುರು- ಅಲಂಕರಿಸು, ಭ್ರೂಕ್ಷೇಪಲಕ್ಷ್ಮೀಲವಕ್ರೀತೇ, ಭ್ರೂಕ್ಷೇಪ-ಹುಬ್ಬಿನವಿಲಾಸದ, ಲಕ್ಷ್ಮೀ-ಸಂಪತ್ತಿನ, ಲವ-ಲೇಶದಿಂದ, ಕ್ರೀತೇ-ಕ್ರಯಮಾಡಲ್ಪಟ್ಟ, ದಾಸಜನೋಪಸೇವಿತಪದಾಂಭೋಜೇ, ದಾಸಜನ-- ಸೇವಕಜನಗಳಿಂತೆ, ಉಪಸೇವಿತ - ಆಶ್ರಯಿಸಲ್ಪಟ್ಟ, ಪದಾಂಭೋಜೇ--ಚರಣಕಮಲಂಗಳುಳ್ಳ, ಇಹ--ಈಕೃಷ್ಣನಲ್ಲಿ, ಸಂಭ್ರಮಃ- ಭಯಸಂಭ್ರಮವು, ಕುತಃ--ಯಾವಕಾರಣದ್ದೆಸೆಯಿಂದ.

ತಾ. ಎಲೈರಾಧೆಯೆ ಬಹುಕಾಲದಿಂ ನಿನ್ನ ಮನಸ್ಸಿನೊಳ್ ಧ್ಯಾನಿಸುತ ಮದನಬಾಧೆಯಿಂ ಬಳಲಿ ನಿನ್ನ ಅಧರಾಮೃತಪಾನವಂ ಬಯಸುತಲಿರುವ ಶ್ರೀಕೃಷ್ಣನಸಮೀಪವಂ ಪೊಂದಿ ನಿನ್ನ ಪುಬ್ಬುಗಳ ಚಮತ್ಕಾರಲೇಶದಿಂ ಕ್ರಯಕ್ಕೆತೆಗೆಯಲ್ಪಟ್ಟು ನಿನ್ನ ಚರಣಾರವಿಂದ ಸೇವೆಯಂಗೈಯುತಲಿರುವ ಈ ಕೃಷ್ಣನಲ್ಲಿ ಯಾತಕ್ಕೋಸ್ಕರ ಭಯಪಡುತಲಿದ್ದೀಯೆ.

ಶ್ಲೋ. ಸಾಸಸಾಧ್ವಸಸಾನಂದಂಗೋವಿಂದೇಲೋಲಲೋಚನಾ॥ ಶಿಂಜಾನಮಂಜುಮಂಜೀರಂಪ್ರವಿವೇಶನಿವೇಶನಂ.

ಟೀ. ಸಾ--ಆರಾಧೆಯು, ಸಸಾಧ್ವಸಸಾನಂದಂ-- ಭಯದೊಡನೆಯು ಸಂತೋಷದೊಡನೆಯೂ, ಕೂಡಿರುವಹ್ಯಾಗೋಹಾಗೆ, ಗೋವಿಂದೇ-- ಶ್ರೀಕೃಷ್ಣನಲ್ಲಿ, ಲೋಲಲೋಚನಾ, ಲೋಲ--ಚಪಲವಾದ, ಲೋಚನಾ--

ನೇತ್ರಗಳುಳ್ಳವಳಾಗಿ, ನಿವೇಶನಂ -- ಲತಾಗೃಹವನ್ನು, ಶಿಂಜಾನಮಂಜು ಮಂಜೀರಂ, ಶಿಂಜಾನ --- ಧ್ವನಿಗೈಯುತಲಿರುವ, ಮಂಜು --- ಮನೋಹರವಾದ, ಮಂಜೀರಂ -- ಪಾದಕಟಕವುಳ್ಳೊಣ್ಣಾಗೋಹಾಗೆ, ಪ್ರವಿವೇಶ--ಪ್ರವೇಶಿಸಿದಳು. ತಾ॥ ಅನಂತರದೋಳ್ ರಾಧೆಯು ಸಂಭ್ರಮಾನಂದಗಳಿಂ ಶ್ರೀಕೃಷ್ಣನನೋಡಿ ಅಂದುಗೆಯಂ ಧ್ವನಿಗೈಸುತ ಲತಾಗೃಹಮಂ ಪ್ರವೇಶಿಸಿದಳು.

ದ್ವಾವಿಂಶಾಷ್ಟಪದೀ ಪ್ರಾರಂಭಃ ರಾಗ ಮಾಳವೀ.

ರಾಧಾವದನವಿಲೊಕನವಿಲಸಿತವಿವಿಧವಿಕಾರವಿಭಂಗಂ।ಜಲನಿಧಿಮಿವವಿಧುಮಂಡಲದರ್ಶನತರಳಿತತುಂಗತರಂಗಂ॥ ಹರಿಮೇಕರಸಂ। ಚಿರಮಭಿಲಷಿತವಿಲಾಸಂ। ಸಾದದರ್ಶಗುರುಹರ್ಷವಶಂವದವದನಮನಂಗವಿಕಾಸಂ॥ ಹರಿಮೇಕರಸಂ।ಚಿರಮಭಿಲಷಿತವಿಲಾಸಂ॥ ... ... ೧

ಟೀ. ರಾಧಾ--ರಾಧೆಯ, ವದನ -- ಮುಖದ, ವಿಲೋಕನ -- ನೋಡೋಣದರಿಂದ, ವಿಲಸಿತ--- ಪ್ರಕಾಶವಾಡಲ್ಪಟ್ಟ, ವಿವಿಧ---ನಾನಾವಿಧವಾದ, ವಿಕಾರಂ---ಮನ್ಮಥವಿಕಾರದ, ವಿಭಂಗಂ --- ರೀತಿಗಳುಳ್ಳ ಆದಕಾರಣವೆ, ವಿಧುಮಂಡಲ -- ಚಂದ್ರಬಿಂಬದ, ದರ್ಶನ -- ನೋಡೋಣದರಿಂದ, ತರಳಿತ--ಕದಲಿಸಲ್ಪಟ್ಟ, ತುಂಗ--ಉನ್ನತವಾದ, ತರಂಗಂ--ತೆರೆಗಳುಳ್ಳ, ಜಲನಿಧಿಮಿವಸ್ಥಿತಂ --- ಸಮುದ್ರವನ್ನೋಪಾದಿಯಲ್ಲಿರುವ, ಏಕರಸಂ -- ಏಕಮುಖ್ಯವಾದ, ರಸಂ -- ಅನುರಾಗರಸವುಳ್ಳ, ಚಿರಂ--ಬಹುಕಾಲವಾಗಿ, ಅಭಿಲಷಿತವಿಲಾಸಂ, ಅಭಿಲಷಿತ-ಇಚ್ಛೈಸಲ್ಪಟ್ಟ, ವಿಲಾಸಂ -- ಕ್ರೀಡೆಯುಳ್ಳ, ಗುರುಹರ್ಷವಶಂವದವದನಂ, ಗುರು -- ಮಹತ್ತಾದ, ಹರ್ಷ -- ಸಂತೋಷಕ್ಕೆ, ವಶಂವದ--ಅಧೀನವಾದ, ವದನಂ -- ಮುಖವುಳ್ಳ, ಅನಂಗವಿಕಾಸಂ, ಅನಂಗ- ಮನ್ಮಥನ, ವಿಕಾಸಂ -- ಕಾಂತಿಯಂತೆ ಕಾಂತಿಯುಳ್ಳ, ಹರಿಂ -- ಶ್ರೀಕೃಷ್ಣನನ್ನು, ಸಾ -- ಆರಾಧೆಯು, ದದರ್ಶ-ಕಂಡಳು.

ಹಾರಮಮಲತರತಾರಮುರಸಿದಧತಂಪರಿರಭ್ಯವಿದೂರಂ।ಸ್ಫುಟತರಫೇನಕದಂಬಕರಂಬಿತಮಿವಯಮುನಾಜಲಪೂರಂ॥ ಹರಿಮೇಕರಸಂ. ೨॥

ಟೀ. ಸಾ-- ಆರಾಧೆಯು, ಅಮಲತರತಾರಂ, ಅಮಲತರ --- ಅತ್ಯಂತನಿರ್ಮಲವಾದ, ತಾರಂ --- ಘಟ್ಟಿಯಾದ, ವಿದೂರಂ --- ದೀರ್ಘವಾದ, ಹಾರಂ---ಮುತ್ತಿನಹಾರವನ್ನು, ಉರಸಿ---ಯೆದೆಯಲ್ಲಿ ಪರಿರಭ್ಯ -- ಅಪ್ಪಿಕೊಂಡು,ದಧತಂ -- ಧರಿಶಿಕೊಂಡಿರುವ, ಆದಕಾರಣವೆ, ಸ್ಫುಟ

ತರಫೇನಕದಂಬಕರಂಬಿತಂ, ಸ್ಫುಟತರ --- ಅತಿಪ್ರಕಾಶವಾದ, ಫೇನ--- ತೆರೆಗಳ, ಕದಂಬ -- ಸಮೂಹದಿಂದ, ಕರಂಬಿತಂ -- ವ್ಯಾಪ್ತವಾದ, ಯಮುನಾಜಲಪೂರಮಿವಸ್ಥಿತಂ, ಯಮುನಾ-- ಕಾಳಿಂದೀನದಿಯ, ಜಲ -- ಉದಕದ, ಪೂರಮಿವಸ್ಥಿತಂ--ಪ್ರವಾಹವನ್ನೇಪಾದಿಯಲ್ಲಿರುವ, ಹರಿಂ--ಕೃಷ್ಣನನ್ನು, ದದರ್ಶ-ಕಂಡಳು;

ಶ್ಯಾಮಲಮೃದುಲಕಳೇಬರಮಂಡಲಮಧಿಗತಗೌರದುಕೂಲಂ । ನೀಲನಳಿನಮಿವಪೀತಪರಾಗಪಟಲಭರವಲಯಿತಮೂಲಂ. ಹರಿಮೇಕರಸಂ.

ಟೀ. ಸಾ -- ಆರಾಧೆಯು, ಶ್ಯಾಮಲಮೃದುಲಕಳೇಬರಮಂಡಲಂ, ಶ್ಯಾಮಲ--ನೀಲವಾದ, ಮೃದುಲ -- ಕೋಮಲವಾದ, ಕಳೇಬರಮಂಡಲಂ-- ಶರೀರಮಂಡಲವುಳ್ಳ, ಅಧಿಗತಗೌರದುಕೂಲಂ, ಅಧಿಗತ-- ಹೊಂದಿರುವ, ಗೌರ -- ಹೊಂಬಣ್ಣವಾದ, ದುಕೂಲಂ -- ವಸ್ತ್ರವುಳ್ಳವನಾದ ಕಾರಣವೆ, ಪೀತ -- ಹೊಂಬಣ್ಣವಾದ, ಪರಾಗ-- ಪುಷ್ಪಧೂಳಿಗಳ, ಪಟಲ -- ಸಮೂಹದ, ಭರ -- ಆಧಿಕ್ಯದಿಂದ, ವಲಯಿತ -- ಸುತ್ತವರಿಯಲ್ಪಟ್ಟ, ಮೂಲಂ -- ಮೂಲಪ್ರದೇಶವುಳ್ಳ, ನೀಲನಳಿನಮಿವಸ್ಥಿತಂ -- ಕನ್ನೈದಿಲೆಪುಷ್ಪದಂತಿರುವ, ಹರಿಂ-ಕೃಷ್ಣನನ್ನು, ದದರ್ಶ---ಕಂಡಳು.

ತರಳದೃಗಂಚಲಚಲನಮನೋಹರವದನಜನಿತರತಿರಾಗಂ । ಸ್ಫುಟಕಮಲೋದರಖೇಲಿತಖಂಜನಯುಗಮಿವಶರದಿತಟಾಕಂ। ಹರಿಮೇಕರಸಂ. ೪

ಟೀ. ಸಾ-ಆರಾಧೆಯು, ತರಳ--ಚಂಚಲವಾದ, ದೃಕ್--ನೇತ್ರಗಳ ಅಂಚಲ--ಕೊನೆಗಳ, ಚಲನ-- ಕದಲೋಣದರಿಂದ, ಮನೋಹರ -- ಚೆಲುವಾದ, ವದನಂ--ಮುಖದಲ್ಲಿ, ಜನಿತ-- ಉಂಟಾದ, ರತಿರಾಗಂ -- ಸುರತಾನುರಾಗವುಳ್ಳವನಾದಕಾರಣವೆ, ಶರದಿ -- ಶರತ್ಕಾಲದಲ್ಲಿ, ಸ್ಫುಟ -- ವಿಕಸಿಸಿರುವ, ಕಮಲ -- ತಾವರೆಯ, ಉದರ -- ಮಧ್ಯದಲ್ಲಿ, ಖೇಲಿತ -- ಕ್ರೀಡಿಸುತಲಿರುವ, ಖಂಜನ--ಖಂಜನಪಕ್ಷಿಗಳ, ಯುಗಂ--ಯುಗ್ಮವುಳ್ಳ ತಟಾಕಮಿವಸ್ಥಿತಂ--ಕೆರೆಯಂತಿರುವ, ಹರಿಂ--ಶ್ರೀಕೃಷ್ಣಸ್ವಾಮಿಯನ್ನು ದದರ್ಶ--ಕಂಡಳು.

ವದನಕಮಲಪರಿಶೀಲನಮಿಳಿತಮಿಹಿರಸಮಕುಂಡಲಶೋಭಂ।ಸ್ಮಿತರುಚಿರುಚಿರಸಮುಜ್ಜ್ವಲಿತಾಧರಪಲ್ಲವಕೃತರತಿಲೋಭಂ।ಹರಿಮೇಕರಸಂ। ೫॥

ಟೀ. ಸಾ -- ಆರಾಧೆಯು, ವದನ-- ಮುಖವೆಂಬ, ಕಮಲ -- ತಾವರೆಪುಷ್ಪದ, ಪರಿಶೀಲನ-- ಸಂಬಂಧದಿಂದ, ಮಿಳಿತ -- ಸೇರಿಕೊಂಡಿರುವ, ಮಿಹಿರ -- ಸೂರ್ಯದೊಡನೆ, ಸಮ -- ಸಮಾನವಾದ, ಕುಂಡಲ -- ಕ

ರ್ಣಕುಂಡಲಗಳ, ಶೋಭಂ--ಕಾಂತಿಯುಳ್ಳ, ಸ್ಮಿತ -- ಮುಗುಳ್ನಗೆಯು, ರುಚಿ--ಕಾಂತಿಯಿಂದ, ರುಚಿರ -- ಮನೋಹರವಾದ, ಸಮುಜ್ಜ್ವಲಿತ -ಪ್ರಕಾಶಿಸುತ್ತಲಿರುವ, ಅಧರಪಲ್ಲವ-- ತಳಿರಂತಿರುವತುಟಿಯಿಂದ, ಕೃತ--ಮಾಡಲ್ಪಟ್ಟ, ರತಿ-ಸುರತದ, ಲೋಭಂ-ಆಶೆಯುಳ್ಳ, ಹರಿಂ--ಕೃಷ್ಣನನ್ನು ದದರ್ಶ--ಕಂಡಳು.

ಶಶಿಕಿರಣಚ್ಛುರಿತೋದರಜಲಧರಸುಂದರಸಕುಸುಮಕೇಶಂ|ತಿಮಿರೋದಿತವಿಧುಮಂಡಲನಿರ್ಮಲಮಲಯಜತಿಲಕನಿವೇಶಂ॥ ಹರಿಮೇಕರಸಂ ೬॥

ಟೀ. ಸಾ--ಆರಾಧೆಯು, ಶಶಿ -- ಚಂದ್ರನ, ಕಿರಣ-- ಕಾಂತಿಯಿಂದ ಛ್ಛುರಿತ--ವ್ಯಾಪ್ತವಾದ, ಉದರ--ಮಧ್ಯಪ್ರದೇಶವುಳ್ಳ, ಜಲಧರ--ಮೇಘದಂತೆ, ಸುಂದರ--ಮನೋಹರವಾದ, ಸಕುಸುಮ--ಪುಷ್ಪಗಳೊಡಗೂಡಿದ, ಕೇಶಂ--ಕೂದಲುಗಳುಳ್ಳ, ತಿಮಿರ-ಅಂಧಕಾರದಲ್ಲಿ, ಉದಿತ--ಪುಟ್ಟಿದ, ವಿಧುಮಂಡಲ--ಚಂದ್ರಮಂಡಲದಂತೆ, ನಿರ್ಮಲ--ಸ್ವಚ್ಛವಾದ, ಮಲಯಜ-ಶ್ರೀಗಂಧದ, ತಿಲಕ--ಬೊಟ್ಟಿನ, ನಿವೇಶಂ--ಇಡೋಣವುಳ್ಳ, ಹರಿಂ--ಕೃಷ್ಣನನ್ನು, ದದರ್ಶ-ಕಂಡಳು.

ವಿಪುಲಪುಲಕದರದಂತುರಿತಂರತಿಕೇಳಿಕಳಾಭಿರಧೀರಂ| ಮಣಿಗಣಕಿರಣಸಮೂಹಸಮುಜ್ಜ್ವಲಭೂಷಣಸುಭಗಶರೀರಂ! ಹರಿಮೇಕರಸಂ ೭॥

ಟೀ. ಸಾ -- ಆರಾಧೆಯು, ವಿಪುಲಪುಲಕದರದಂತುರಿತಂ, ವಿಪುಲ -- ವಿಸ್ತಾರವಾದ, ಪುಲಕ --ರೋಮಾಂಚನ, ದರ-- ಸ್ವಲ್ಪವಾಗಿ, ದಂತುರಿತಂ--ವ್ಯಾಪ್ತವಾದ, ರತಿಕೇಳಿಕಳಾಭಿಃ -- ರತಿ--ಸು[illegible] ಕಳಾಭಿಃ--ಕ್ರೀಡಾಕಳೆಗಳಿಂದ, ಅಧೀರಂ--ಚಂಚಲವಾ[illegible]-- ರತ್ನಸಮೂಹದ, ಕಿರಣ--ಕಾಂತಿಗಳ, ಸಮೂಹ-- ಗುಂಪಿನಿಂದ, ಸಮುಜ್ವಲ -- ಪ್ರಕಾಶಮಾನವಾದ, ಭೂಷಣ -- ಆಭರಣಗಳಿಂದ, ಸುಭಗ-ಮನೋಹರವಾದ, ಶರೀರಂ-ದೇಹವುಳ್ಳ, ಹರಿಂ-ಕೃಷ್ಣನನ್ನು, ದದರ್ಶ--ಕಂಡಳು.

ಶ್ರೀಜಯದೇವಭಣಿತವಿಭವಂದ್ವಿಗುಣೀಕೃತಭೂಷಣಭಾರಂ| ಪ್ರಣಮತ ಹೃದಿವಿನಿಧಾಯಹರಿಂಸುಚಿರಂಸುಕೃತೋದಯಸಾರಂ॥೮॥ ಹರಿಮೇಕರಸಂಚಿರಮಭಿಲಷಿತವಿಲಾಸಂ|ಸಾದದರ್ಶಗುರುಹರ್ಷವಶಂವದವದನಮನಂಗವಿಕಾಸಂ|ಹರಿಮೇಕರಸಂಚಿರಮಭಿಲಷಿತವಿಲಾಸಂ.

ಟೀ. ಶ್ರೀಜಯದೇವಭಣಿತವಿಭವಂ, ಶ್ರೀಜಯದೇವ -- ಜಯದೇವಕವಿಯಿಂದ, ಭಣಿತ--ಹೇಳಲ್ಪಟ್ಟ, ವಿಭವ--ಮಾಹಾತ್ಮ್ಯವುಳ್ಳ, ದ್ವಿಗುಣೀ

ಕೃತಭೂಷಣಭಾರಂ, ದ್ವಿಗುಣೀಕೃತ --- ಇಮ್ಮಡಿಯಾಗಿ ಮಾಡಲ್ಪಟ್ಟ, ಭೂಷಣ-- ಆಭರಣಗಳ, ಭಾರಂ -- ಭಾರಉಳ್ಳ, ಸುಕೃತೋದಯಸಾರಂ, ಸುಕೃತ--ಪುಣ್ಯದ, ಉದಯ -- ಆವಿರ್ಭಾವದ, ಸಾರಂ -- ಮುಖ್ಯಾಂಶರೂಪನಾದ, ಹರಿಂ -- ಕೃಷ್ಣನನ್ನು, ಸುಚಿರಂ -- ಬಹುಕಾಲಪರ್ಯಂತರ, ಹೃದಿ--ಮನಸ್ಸಿನಲ್ಲಿ, ವಿನಿಧಾಯ--ಇರಿಸಿ, ಪ್ರಣಮತ-- ನಮಸ್ಕರಿಸಿರೀ.

ತಾ. ಇದರಿಂ ರಾಧಾದೇವಿಯುಯುದಯೊಳ್ ಮುತ್ತಿನಹಾರವಂತೊಟ್ಟು ಹಣೆಯೊಳ್ ಗಂಧದಬಟ್ಟನ್ನಿಟ್ಟು ವಿವಿಧಮಣಿಭೂಷಣಗಳ ಝಳಪಿನಿಂದೆಸೆವ ಪೂರ್ವಜನ್ಮಪುಣ್ಯಗಳಿಂ ಲಭ್ಯನಾದ ತನ್ನ ದರ್ಶನಮಾತ್ರದಿಂದಲೆಪುಟ್ಟಿದ ಮನ್ಮಥವಿಕಾರವುಳ್ಳ ನೀಲಮೇಘಶ್ಯಾಮನಾದ ಶ್ರೀಕೃಷ್ಣನಂ ಕಂಡಳೆಂಬುದು ವಿವರಿಸಲ್ಪಟ್ಟಿತು.

ಶ್ಲೋ॥ ಅತಿಕ್ರಮ್ಯಾಪಾಂಗಂಶ್ರವಣತಟಪರ್ಯಂತಗಮನಪ್ರಯಾಸೇನೇವಾ
ಕ್ಷ್ಣೋಸ್ತರಳತರಭಾವಂಗಮಿತಯೋಃ॥ ಇದಾನೀಂರಾಧಾಯಾಃಪ್ರಿಯತಮಸ
ಮಾಲೋಕಸಮಯೆಪಪಾತಸ್ವೇದಾಂಬುಪ್ರಸರಇವಹರ್ಷಾಶ್ರುನಿಕರಃ.

ಕವಿಯು ರಾಧೆಗೆ ಕೃಷ್ಣದರ್ಶನದಿಂ ಪುಟ್ಟಿದ ಆನಂದ
ಬಾಷ್ಪವಂಬಣ್ಣಿಸುತ್ತಾನೆ.

ಟೀ. ಅಪಾಂಗಂ-ನೇತ್ರಾಂತವನ್ನು, ಅತಿಕ್ರಮ್ಯ-ದಾಂಟಿ, ಶ್ರವಣತಟಪರ್ಯಂತಗಮನಪ್ರಯಾಸೇನೇವ, ಶ್ರವಣ--ಕಿವಿಗಳ, ತಟಪರ್ಯಂತ--ಪ್ರದೇಶದವರೆಗೂ, ಗಮನ-ಹೋಗೋಣದರಿಂದುಂಟಾದ, ಪ್ರಯಾಸೇನೇವ-ಆಯಾಸದಿಂದಲೋಯೆಂಬಂತೆ, ತರಳತರಭಾವಂ - ಚಂಚಲತ್ವವನ್ನು, ಗಮಿತಯೋಃ-ಹೊಂದಿಸಲ್ಪಟ್ಟ, ರಾಧಾಯಾಃ-ರಾಧಾದೇವಿಯ, ಅಕ್ಷ್ಣೋಃ-ನೇತ್ರಗಳಲ್ಲಿ, ಇದಾನೀಂ - ಈಗ, ಪ್ರಿಯತಮಸಮಾಲೋಕಸಮಯೆ, ಪ್ರಿಯತಮ-ನಾಯಕನಾದಕೃಷ್ಣನ, ಸಮಾಲೋಕಸಮಯೆ-ದರ್ಶನಕಾಲದಲ್ಲಿ, ಹರ್ಷಾಶ್ರುನಿಕರಃ, ಹರ್ಷಾಶ್ರು-ಆನಂದಬಾಷ್ಪಗಳ, ನಿಕರಃ-- ಸಮೂಹವು, ಸ್ವೇದಾಂಬುಪ್ರಸರಇವ, ಸ್ವೇದಾಂಬು--ಬೆವರ್ನೀರಿನ, ಪ್ರಸರಇವ -- ಧಾರೆಯೋಯೆಂಬಂತೆ, ಪಪಾತ-ಬಿತ್ತು.

ತಾ. ಶ್ರೀಕೃಷ್ಣನದರ್ಶನಸಮಯದಲ್ಲಿ ರಾಧೆಯ ಕಣ್ಗಳೊಳ್ ಯೆಲ್ಲೆಯನ್ನತಿಕ್ರಮಿಸಿ ಕಿವಿಯಪರ್ಯಂತರ ನಡದುಪೋದಶ್ರಮದಿಂ ಪುಟ್ಟಿದಬೆವರ್ನೀರಿನ ಬಿಂದುಗಳೋಯೆಂಬಂತೆ ಆನಂದಬಾಷ್ಪಗಳಾವಿರ್ಭವಿಸಿದವು.

ಶ್ಲೋ. ಭಜಂತ್ಯಾಸ್ತಲ್ಪಾಂತಂಕೃತಕಪಟಕಂಡೂತಿಪಿಹಿತಸ್ಮಿತಂಯಾತೇ ಗೇಹಾದ್ಬಹಿರಪಿಹಿತಾಳೀಪರಿಜನೇ ॥ ಪ್ರಿಯಾಸ್ಯಂಪಶ್ಯಂತ್ಯಾಃಸ್ಮರಶರಸಮಾಕೂತಸುಭಗಂಸಲಜ್ಜಾಲಜ್ಜಾಪಿವ್ಯಗಮದಿವಸುದೂರಂಮೃಗದೃಶಃ॥

ಗೀತಗೋವಿಂದೆಮಹಾಕಾವ್ಯೆಏಕಾದಶಸ್ಸರ್ಗಃ.

ಟೀ. ತಲ್ಪಾಂತಂ -- ಹಾಸಿಗೆಯಸಮೀಪವನ್ನು, ಭಜಂತ್ಯಾಃ -- ಹೊಂದುತಲಿರುವಳಾದಕಾರಣವೆ, ಹಿತಾಳೀಪರಿಜನೆಪಿ, ಹಿತಾಳಿ --- ಪ್ರಿಯಸಖೀರುಗಳೆಂಬ, ಪರಿಜನೆಪಿ - ಪರಿವಾರಜನವೂ, ಕೃತಕಪಟಕಂಡೂತಿ, ಕೃತ -- ಮಾಡಲ್ಪಟ್ಟ, ಕಪಟ -- ಕೃತ್ರಿಮವಾದ, ಕಂಡೂತಿ - ತುರಿಸೋಣವುಳ್ಳ ಹ್ಯಾಗೋಹಾಗೆ, ಪಿಹಿತಸ್ಮಿತಂ, ಪಿಹಿತ -- ಮಾಡಲ್ಪಟ್ಟ, ಸ್ಮಿತಂ -- ಮುಗುಳ್ನಗೆಯುಳ್ಳೋಣಹ್ಯಾಗೋಹಾಗೆ, ಗೇಹಾತ್ - ಲತಾಗೃಹದ್ದೆಸೆಯಿಂದ, ಬಹಿಃ -- ಹೊರಗೆ, ಯಾತೆಸತಿ - ಹೋಗುತಿರಲಾಗಿ, ಸ್ಮರಶರಸಮಾಕೂತಸುಭಗಂ, ಸ್ಮರಶರ --ಮನ್ಮಥಬಾಣದಿಂದುಂಟಾದ, ಸಮಾಕೂತ - ರತ್ಯಭಿಪ್ರಾಯದಿಂದ, ಸುಭಗಂ -- ಮನೋಹರವಾಗಿ ರೋಣಹ್ಯಾಗೋಹಾಗೆ, ಪ್ರಿಯಾಸ್ಯಂ -- ಕಾಂತನಮುಖವನ್ನು, ಪಶ್ಯಂತ್ಯಾಃ - ನೋಡುತಲಿರುವ, ಮೃಗದೃಶಃ -- ಜಿಂಕೆಯಕಣ್ಣುಗಳಂತೆ ಕಣ್ಣುಗಳುಳ್ಳ ರಾಧೆಯ, ಲಜ್ಜಾಪಿ - ನಾಚಿಕೆಯೂಕೂಡ, ಸಲಜ್ಜೆವ -- ನಾಚಿಕೆಯೊಡಗೂಡಿದುದೋಯೆಂಬಂತೆ, ಸುದೂರಂ -- ಬಹುದೂರವಾಗಿ, ವ್ಯಗಮತ್ - ಪೋರಮಟ್ಟಿತು. ತಾ. ರಾಧೆಯು ಶ್ರೀಕೃಷ್ಣನ ಹಾಸಿಗೆಯ ಸಮೀಪವಂ ಪೊಂದಲು ಕೆಳದಿಯರು ಕಪಟದಿಂ ತಲೆಯಂತುರಿಸುತ್ತಮುಗುಳ್ನಗೆಗೂಡಿ ಹೊರಗೆ ಪೊರಮಡುತಿರಲಾಗಿ ಸುರತ ಸುಖಮಂ ಬಯಸಿ ಪ್ರಾಣಕಾಂತನ ಮೊಗವಮ ನೋಡುವ ರಾಧಾದೇವಿಯ ಲಜ್ಜೆಯೇ ಲಜ್ಜೆಗೊಂಡು ಪೊರಮಟ್ಟಿತು.

ಶ್ಲೋ. ಗತವತಿಸಖೀಬೃಂದೆಮಂದತ್ರಪಾಭರನಿರ್ಭರಸ್ಮರಶರವಶಾಕೂತಸ್ಫೀತಸ್ಮಿತಸ್ನಪಿತಾಧರಾಂ ॥ ಸರಸಮಲಸಂದೃಷ್ಟ್ವಾಹೃಷ್ಟಾಂಮುಹುರ್ನವಪಲ್ಲವಪ್ರಸವಶಯನೆನಿಕ್ಷಿಪ್ತಾಮುವಾಚಹರಿಃ ಪ್ರಿಯಾಂ॥

ಟೀ. ಸಖೀಬೃಂದೆ - ಕೆಳದಿಯರಗುಂಪು, ಗತವತಿಸತಿ - ಪೋದದ್ದಾಗಿರುತಿರಲಾಗಿ, ಮಂದ - ಸ್ವಲ್ಪವಾದ, ತ್ರಪಾ - ನಾಚಿಕೆಯ, ಭರ - ಅತಿಶಯದಿಂದ, ನಿರ್ಭರ -- ಪರಿಪೂರ್ಣವಾದ, ಸ್ಮರಶರ -- ಮನ್ಮಥನಬಾಣಕ್ಕೆ, ವಶ - ಅಧೀನವಾದ, ಆಕೂತ - ಅಭಿಪ್ರಾಯದಿಂದ, ಸ್ಫೀತ- ವ್ಯಾಪ್ತವಾದ, ಸ್ಮಿತ - ಮಂದಹಾಸದಿಂದ, ಸ್ನಪಿತ- ನನಸಲ್ಪಟ್ಟ, ಅಧರಾಂ-

ತುಟಿಯುಳ್ಳ, ಮುಹುಃ — ಬಾರಿಬಾರಿಗೂ, ನವಪಲ್ಲವಪ್ರಸವಶಯನೇ, ನವ - ನೂತನವಾದ, ಪಲ್ಲವ - ತಳಿರ್ಗಳ, ಪ್ರಸವ - ಪುಷ್ಪಗಳ, ಶಯನೇ - ಹಾಸಿಗೆಯಲ್ಲಿ, ನಿಕ್ಷಿಪಾಕ್ಷೀಂ, ನಿಕ್ಷಿಪ್ತ - ಇರಿಸಲ್ಪಟ್ಟ, ಅಕ್ಷೀಂ-ನೇತ್ರಗಳುಳ್ಳ, ಹೃಷ್ಟಾಂ-ಸಂತುಷ್ಟಳಾದ, ಪ್ರಿಯಾಂ - ಕಾಂತೆಯನ್ನು, ದೃಷ್ಟ್ವಾ - ನೋಡಿ, ಹರಿಃ - ಕೃಷ್ಣನು, ಸರಸಂ-ಅನುರಾಗದೊಡಗೂಡಿ, ಅಲಸಂ-ಮಂದವಾಗಿರೋಣ ಹ್ಯಾಗೋಹಾಗೆ, ಉವಾಚ- ಹೇಳಿದನು.

ತಾ. ಬಳಿಕಸ್ವಲ್ಪವಾದ ಲಜ್ಜೆಯೊಡಗೂಡಿ ಮುಗುಳ್ನಗೆಗೈಯುತ ಪಲ್ಲವಶಯನವನ್ನೇ ನೋಡುತಲಿರುವ ರಾಧೆಯಂನೋಡಿ ಶ್ರೀಕೃಷ್ಣನು ಪ್ರೀತಿಯಿಂ ಮೆಲ್ಲನೆ ಇಂತೆಂದನು.

ತ್ರಯೋವಿಂಶಾಷ್ಟಪದೀ ಪ್ರಾರಂಭಃ, ರಾಗ-ನಾದನಾಮಕ್ರಿಯಾ.

ಕಿಸಲಯಶಯನತಲೇಕುರುಕಾಮಿನಿಚರಣನಳಿನವಿನಿವೇಶಂ|ತವಪದಪಲ್ಲವ
ವೈರಿಪರಾಭವಮಿದಮನುಭವತುಸುವೇಶಂ ||೧|| ಕ್ಷಣಮಧುನಾನಾರಾಯಣ
ಮನುಗತಮನುಭಜರಾಧೆಕ್ಷಣಮಧುನಾನಾರಾಯಣಂ||

ಟೀ. ಹೇಕಾಮಿನೀ — ಎಲೈರಾಧೆಯೆ, ಕಿಸಲಯಶಯನತಲೇ, ಕಿಸಲಯ - ಚಿಗುರುಗಳ, ಶಯನ - ಹಾಸಿಗೆಯ, ತಲೇ - ಪ್ರದೇಶದಲ್ಲಿ, ಚರಣನಳಿನವಿನಿವೇಶಂ, ಚರಣನಳಿನ - ಕಮಲದಂತಿರುವ ಪಾದಗಳ, ವಿನಿವೇಶಂ- ಇರಿಸೋಣವನ್ನು, ಕುರು — ಮಾಡು, ತವ — ನಿನ್ನ, ಪದಪಲ್ಲವವೈರಿ, ಪದ - ಪಾದಗಳೆಂಬ, ಪಲ್ಲವ - ಚಿಗುರುಗಳಿಗೆ, ವೈರಿ - ಶತ್ರುವಾದ, ಸುವೇಶಂ - ಚನ್ನಾಗಿ ಹರಡಿರುವ, ಇದಂ- ಈಪಲ್ಲವಶಯನವು, ಪರಾಭವಂ- ತಿರಸ್ಕಾರವನ್ನು, ಅನುಭವತು - ಅನುಭವಿಸಲಿ, ಅನುಗತಂ — ಅನುಸರಿಸಿಬಂದ, ನಾರಾಯಣಂ — ಕೃಷ್ಣನನ್ನು, ಅಧುನಾ — ಈಗ, ಕ್ಷಣಂ— ಕ್ಷಣಕಾಲದಲ್ಲಿ, ಅನುಭಜ-ಹೊಂದು.

ಕರಕಮಲೇನಕರೋಮಿಚರಣವಹನಮಹಮಾಗಮಿತಾಸಿವಿದೂರಂ|ಕ್ಷಣಮು
ಪಕುರುಶಯನೋಪರಿಮಾಮಿವನೂಪುರಮನುಗತಿಶೂರಂ॥ ಕ್ಷಣಮಧುನಾ.

ಟೀ. ಅಹಂ- ನಾನು, ಕರಕಮಲೇನ-ಕಮಲದಂತಿರುವಹಸ್ತದಿಂದ, ಚರಣವಹನಂ, ಚರಣ — ಪಾದಗಳ, ವಹನಂ — ವಹಿಸೋಣವನ್ನು, ಕರೋಮಿ — ಮಾಡುತಲಿಧೇನೆ, ವಿದೂರಂ - ಬಹುದೂರವು, ಆಗಮಿತಾಸಿ - ನಡದುಬಂದವಳಾದೆ, ಶಯನೋಪರಿ -ಹಾಸಿಗೆಯಮೇಲೆ, ಅನುಗತಿಶೂರಂ, ಅನುಗತಿ - ಅನುಸರಣೆಯಲ್ಲಿ, ಶೂರಂ — ಸಮರ್ಥನಾದ, ಮಾಮಿವ - ನನ್ನಂತಿರುವ, ನೂಪುರಂ — ಅಂದುಗೆಯನ್ನು, ಕ್ಷಣಂ - ಕ್ಷಣಕಾ

ಬನ್ನು, ಉಪಕುರು – ಇರಿಸು.

ವದನಸುಧಾನಿಧಿಗಳಿತಮಮೃತಮಿವರಚಯವಚನಮನುಕೂಲಂ।ವಿರಹಮಿ ವಾಪನಯಾಮಿಪಯೋಧರರೋಧಕಮುರಸಿದುಕೂಲಂ॥ಕ್ಷಣಮಧುನಾ. ೩॥

ಟೀ. ವದನಸುಧಾನಿಧಿಗಳಿತಂ, ವದನ – ಮುಖವೆಂಬ, ಸುಧಾನಿಧಿ – ಚಂದ್ರನದೆಸೆಯಿಂದ, ಗಳಿತಂ – ಜಾರಿದ, ಅಮೃತಮಿವ – ಅಮೃತವ ನ್ನೋಪಾದಿಯಲ್ಲಿ, ಅನುಕೂಲಂ – ಹಿತವಾದ, ವಚನಂ – ನುಡಿಯನ್ನು, ರಚಯ – ಹೇಳು, ಉರಸಿ – ವಕ್ಷಸ್ಥಲದಲ್ಲಿ, ಪಯೋಧರರೋಧಕಂ, ಪ ಯೋಧರ – ಸ್ತನಗಳನ್ನು, ರೋಧಕಂ – ತಡೆಯುತಲಿರುವ, ದುಕೂ ಲಂ – ವಸ್ತ್ರವನ್ನು, ವಿರಹಮಿವ – ವಿಯೋಗವನ್ನೋಪಾದಿಯಲ್ಲಿ, ಅಪನ ಯಾಮಿ – ಹೋಗಲಾಡಿಸುತ್ತೇನೆ.

ಪ್ರಿಯಪರಿರಂಭಣರಭಸವಲಿತಮಿವಪುಲಕಿತಮತಿದುರವಾಪಂ। ಮದುರಸಿ ಕುಚಕಲಶಂವಿನಿವೇಶಯಶೋಷಯಮನಸಿಜತಾಪಂ॥ ಕ್ಷಣಮಧುನಾ. ॥೪॥

ಟೀ. ಪ್ರಿಯಪರಿರಂಭಣರಭಸವಲಿತಮಿವ, ಪ್ರಿಯ–ನಾಯಕನ, ಪರಿರಂಭಣ – ಆಲಿಂಗನದ, ರಭಸ – ವೇಗದಿಂದ, ವಲಿತಮಿವ – ವ್ಯಾಪ್ತ ವಾದುದೋಯೆಂಬಂತೆ, ಪುಲಕಿತಂ – ರೋಮಾಂಚಯುಕ್ತವಾದ, ಅತಿದು ರವಾಪ – ಅತ್ಯಂತದುರ್ಲಭವಾದ, ಕುಚಕಲಶಂ – ಸ್ತನಕಲಶವ ನ್ನು, ಮದುರಸಿ, ಮತ್ – ನನ್ನ, ಉರಸಿ – ವಕ್ಷಸ್ಥಲದಲ್ಲಿ, ವಿನಿವೇಶಯ – ಇರಿಸು, ಮನಸಿಜತಾಪಂ, ಮನಸಿಜ – ಮನ್ಮಥನಿಂದುಂಟಾದ, ತಾಪಂ – ಸಂತಾಪವನ್ನು, ಶೋಷಯ – ಶೋಷಿಸು.

ಅಧರಸುಧಾರಸಮುಪನಯಭಾಮಿನಿಜೀವಯಮೃತಮಿವದಾಸಂ। ತ್ವಯಿ ವಿನಿಹಿತಮನಸಂವಿರಹಾನಲದಗ್ಧವಪುಷಮವಿಲಾಸಂ॥ ಕ್ಷಣಮಧುನಾ ॥೫॥

ಟೀ. ಹೆಭಾಮಿನಿ – ಎಲೈರಾಧೆಯೆ, ಅಧರಸುಧಾರಸಂ ಅಧರಾ ಮೃತರಸವನ್ನು, ಉಪನಯ – ಸಮೀಪವಂ ಪೊಂದಿಸು, ತ್ವಯಿ – ನಿನ್ನ ಲ್ಲಿ, ವಿನಿಹಿತಮನಸಂ, ವಿನಿಹಿತ – ಇರಿಸಲ್ಪಟ್ಟ, ಮನಸಂ – ಮನಸ್ಸುಳ್ಳ, ವಿರಹಾನಲದಗ್ಧವಪುಷಂ, ವಿರಹಾನಲ – ವಿಯೋಗಾಗ್ನಿಯಿಂದ, ದಗ್ಧ – ದಹಿಸಲ್ಪಟ್ಟ, ವಪುಷಂ – ಶರೀರವುಳ್ಳ, ಅವಿಲಾಸಂ – ಕ್ರೀಡಾರಹಿತನಾ ದ, ಮೃತಮಿವಸ್ಥಿತಂ – ಮರಣವಂ ಪೊಂದಿದವನಂತಿರುವ, ದಾಸಂ – ಸೇ ವಕನಾದ ನನ್ನನ್ನು, ಜೀವಯ – ಬದುಕಿಸು.

ಶಶಿಮುಖಿಮುಖರಯಮಣಿರಶನಾಗುಣಮನುಗುಣಕಂಠನಿನಾದಂ।ಶ್ರುತಿಯು ಗಳೆಪಿಕರುತವಿಕಲೇಮಮಶಮಯಚಿರಾದವಸಾದಂ ॥ ಕ್ಷಣಮಧುನಾ ॥೬॥

ಟೀ. ಹೇಶಶಿಮುಖಿ - ಎಲೈ ಚಂದ್ರನಂತೆಮುಖವುಳ್ಳರಾಧೆಯೆ, ತವ-ನಿನ್ನ, ಮಣಿರಶನಾಗುಣಂ, ಮಣಿ - ರತ್ನಮಯವಾದ, ರಶನಾ - ಒಡ್ಯಾಣದ, ಗುಣಂ -- ಸೂತ್ರವನ್ನು, ಅನುಗುಣಕಂಠನಿನಾದಂ, ಅನುಗುಣ-ಸಮಾನವಾದ, ಕಂಠನಿನಾದಂ -- ಕಂಠಸ್ವರವುಳ್ಳುದಕ್ಕೆ ಹ್ಯಾಗೋಹಾಗೆ, ಮುಖರಯ -- ಧ್ವನಿಗೈಸು, ವಿಕಲೆ -- ಸೌಖ್ಯಶೂನ್ಯವಾದ, ಮಮ - ನನ್ನ, ಶ್ರುತಿಯುಗಳೆ -- ಕಿವಿಗಳಯುಗ್ಮದಲ್ಲಿ, ಕುರು -- ಮಾಡು, ಚಿರಾತ್ -- ಬಹುಕಾಲವಾಗಿರುವ, ಅವಸಾದಂ -- ಕಾರ್ಶ್ಯವನ್ನು, ಶಮಯ - ಶಾಂತಿಗೊಳಿಸು.

ಮಾಮತಿವಿಫಲರುಷಾವಿಕಲೀಕೃತಮವಲೋಕಿತಮಧುನೇದಂ। ಮೀಲತಿಲಜ್ಜಿತಮಿವನಯನಂತವವಿರಮವಿಸೃಜಗತಖೇದಂ॥ ಕ್ಷಣಮಧುನಾ. ॥೭॥

ಟೀ. ಅತಿವಿಫಲರುಷಾ, ಅತಿವಿಫಲ -- ಅತ್ಯಂತವ್ಯರ್ಥವಾದ, ರುಷಾ - ಕೋಪದಿಂದ, ವಿಕಲೀಕೃತಂ- ಶೂನ್ಯೇಂದ್ರಿಯನಾಗಿಮಾಡಲ್ಪಟ್ಟ, ಮಾಂ - ನನ್ನನ್ನು, ಅಧುನಾ - ಈಗ, ಅವಲೋಕಿತಂ -- ನೋಡುತಲಿರುವ, ತವ -- ನಿನ್ನ, ಇದಂನಯನಂ -- ಈ ನೇತ್ರವು, ಲಜ್ಜಿತಮಿವ - ನಾಚಿಕೆಪಡಿಸಲ್ಪಟ್ಟದ್ದೋಯೆಂಬಂತೆ, ಮೀಲತಿ -- ಮುಚ್ಚಿಕೊಳ್ಳುತಲಿದೆ, ವಿರಮ - ಸುಮ್ಮನಿರು, ಗತಖೇದಂ: ಗತ - ಹೋಗಲಾಡಿಸಲ್ಪಟ್ಟ, ಖೇದಂ-ವ್ಯಥೆಯುಳ್ಳುದಕ್ಕೆ ಹ್ಯಾಗೋಹಾಗೆ; ವಿಸೃಜ - ಬಿಡು.

ಶ್ರೀಜಯದೇವಭಣಿತಮಿದಮನುಪದನಿಗದಿತಮಧುರಿಪುಮೋದಂ।ಜನಯತುರಸಿಕಜನೇಷುಮನೋರಮರತಿರಸಭಾವವಿನೋದಂ॥೮॥ ಕ್ಷಣಮಧುನಾನಾರಾಯಣಮನುಗತಮನುಭಜರಾಧೆ।ಕ್ಷಣಮಧುನಾನಾರಾಯಣಂ॥

ಟೀ. ಅನುಪದನಿಗದಿತಮಧುರಿಪುಮೋದಂ, ಅನುಪದ -- ತತ್‌ಕ್ಷಣದಲ್ಲೇ, ನಿಗದಿತ - ಹೇಳಲ್ಪಟ್ಟ, ಮಧುರಿಪು - ಕೃಷ್ಣನ, ಮೋದಂ -- ಸಂತೋಷವುಳ್ಳ, ಇದಂಶ್ರೀಜಯದೇವಭಣಿತಂ - ಈ ಜಯದೇವಕವಿಯವಾಕ್ಯ, ರಸಿಕಜನೇಷು- ರಸಜ್ಞರಾದವರಲ್ಲಿ, ಮನೋರಮರತಿರಸಭಾವವಿನೋದಂ, ಮನೋರಮ - ಮನೋಹರವಾದ, ರತಿರಸಭಾವಂ -- ಕ್ರೀಡಾರಸಾಭಿಪ್ರಾಯದಿಂದ, ವಿನೋದಂ --- ಮನೋಹರ್ಷವನ್ನು, ಜನಯತು - ಪುಟ್ಟಿಸಲಿ.

ತಾ. ಎಲೈ ರಾಧೆಯೆ ನಿನ್ನ ವಿಯೋಗದಿಂ ಸಂತಪ್ತನಾಗಿ ಅನುಸರಿಸಿಬಂದ ದಾಸನಾದನನ್ನಂ ಅಧರಾಮೃತದಿಂದಲುಂ ಕುಚಕುಂಭಾಲಿಂಗನದಿಂದಲುಂ ವಚನಾಮೃತ ದಿಂದಲುಂ ಕಾಂಚೀಮೇಲಯ ಧ್ವನಿಯಿಂದಲುಂ

ಕಟಾಕ್ಷವೀಕ್ಷಣದಿಂದಲುಂ ನನ್ನ ಸಕಲೇಂದ್ರಿಯಂಗಳಂ ಸಂತೋಷಪಡಿಸಿ ಸುರತದಿಂ ತೃಪ್ತಿಗೊಳಿಸುವ ಹಾಗೆಂದು ಕೃಷ್ಣನು ರಾಧೆಯಂ ಪ್ರಾರ್ಥಿಸಿದನು.

ಶ್ಲೋ. ಪ್ರತ್ಯೂಹಃಪುಲಕಾಂಕುರೇಣನಿಬಿಡಾಶ್ಲೇಷೇನಿಮೇಷೇಣಚಕ್ರೀಡಾಕೂತವಿಲೋಕನೇಧರಸುಧಾಪಾನೇಕಥಾನರ್ಮಭಿಃ॥ ಆನಂದಾಶ್ರುಗಮೇನಮನ್ಮಥಕಳಾಯುದ್ಧೇಪಿಯಸ್ಮಿನ್ನಭೂ ದುದ್ಭೂತಸ್ಸತಯೋರ್ಬಭೂವರಮಿತಾರಂಭಃಪ್ರಿಯಂಭಾವುಕಃ॥

ಟೀ. ಯಸ್ಮಿನ್ -- ಯಾವಸುರತಾರಂಭದಲ್ಲಿ, ತಯೋಃ - ಆರಾಧಾಕೃಷ್ಣರುಗಳಿಗೆ, ನಿಬಿಡಾಶ್ಲೇಷೇ -- ಗಾಢಾಲಿಂಗನದಲ್ಲಿ, ಪುಳಕಾಂಕುರೇಣ- ಪುಳಕ - ರೋಮಾಂಚಗಳ, ಅಂಕುರೇಣ -- ಆವಿರ್ಭಾವದಿಂದಲು, ಕ್ರೀಡಾಕೂತವಿಲೋಕನೇ, ಕ್ರೀಡಾಕೂತ -- ಸುರತಾಭಿಪ್ರಾಯದ, ವಿಲೋಕನೇ - ನೋಡೋಣದರಲ್ಲಿ, ನಿಮೇಷೇಣ - ಕಣ್ಣುಮುಚ್ಚೋಣದರಿಂದಲು, ಅಧರಸುಧಾಪಾನೇ - ಅಧರಾಮೃತಪಾನದಲ್ಲಿ, ಕಥಾನರ್ಮಭಿಃ -- ಕಥಾವಿಹಾರಗಳಿಂದಲು, ಮನ್ಮಥಕಳಾಯುದ್ಧೇಪಿ, ಮನ್ಮಥ- ಕಾಮನಿಂದುಂಟಾದ, ಕಳಾಯುದ್ಧೇಪಿ - ಕ್ರೀಡಾಯುದ್ಧದಲ್ಲೂಕೂಡ, ಆನಂದಾಶ್ರುಗಮೇನ- ಆನಂದಬಾಷ್ಪದ ಆವಿರ್ಭಾವದಿಂದಲು, ಪ್ರತ್ಯೂಹಃ -- ವಿಘ್ನವು, ಉದ್ಭೂತಃ - ಉಂಟಾದದ್ದಾಗಿ, ಅಭೂತ್ - ಆಯಿತೋ, ಸರಮಿತಾರಂಭಃ -- ಆ ಸುರತಪ್ರಾರಂಭವು, ಪ್ರಿಯಂಭಾವುಕಃ -- ಪ್ರೀತಿಕರವಾದದ್ದಾಗಿ, ಬಭೂವ - ಆಯಿತು. ತಾ. ಶ್ರೀಕೃಷ್ಣನು ಸುರತಾರಂಭ ಸೂಚಕವಾದ ಚುಂಬನಮೊದಲಾದಬಾಹ್ಯಸುರತವಿಲಾಸಂಗಳಂ ಮಾಡಲೋಸುಗ ಪ್ರಯತ್ನಿಸಲು ಅಮುಗ್ಧಯಾದ ರಾಧೆಯಿಂದಭಿಪ್ರಾಯ ಗರ್ಭಿತವಾಗಿ ಮಾಡಲ್ಪಟ್ಟ ವಿಘ್ನಗಳೂಕೂಡ ಅತಿರಮಣೀಯವಾಗಿದ್ದವು.

ಶ್ಲೋ. ದೋರ್ಭ್ಯಾಂಸಂಯಮಿತಃಪಯೋಧರಭರೇಣಾಪೀಡಿತಃಪಾಣಿಜೈರಾವಿದ್ಧೋದಶನೈಃಕ್ಷತಾಧರಪುಟಃಶ್ರೋಣೀತಟೇನಾಹತಃ॥ ಹಸ್ತೇನಾನಮಿತಃಕಚೇಧರಸುಧಾಸ್ವಾದೇನಸಂಮೋಹಿತಃ ಕಾಂತಃ ಕಾಮಪಿತೃಪ್ತಿಮಾಪತದಹೋಕಾಮಸ್ಯವಾಮಾಗತಿಃ॥

ಟೀ. ಕಾಂತಃ -- ನಾಯಕನಾದಶ್ರೀಕೃಷ್ಣನು, ದೋರ್ಭ್ಯಾಂ -- ತೋಳುಗಳಿಂದ, ಸಂಯಮಿತಃ - ಕಟ್ಟಲ್ಪಟ್ಟವನಾಗಿಯು, ಪಯೋಧರಭರೇಣ-ಸ್ತನಗಳಭಾರದಿಂದ, ಆಪೀಡಿತಃ - ಪೀಡಿಸಲ್ಪಟ್ಟವನಾಗಿಯು, ಪಾಣಿಜೈಃ - ನಖಗಳಿಂದ, ಆವಿದ್ಧಃ-ಹೊಡೆಯಲ್ಪಟ್ಟವನಾಗಿಯು, ದಶನೈಃ --

ಪಲ್ಲಳಿಂದ, ಕ್ಷತಾಧರಪುಟಃ, ಕ್ಷತ – ಘಾಯವಾಡಲ್ಪಟ್ಟ, ಅಧರಪುಟಃ– ಅಧರ–ಪ್ರದೇಶವುಳ್ಳವನಾಗಿಯು, ಶ್ರೋಣೀತಟೇನ —— ನಿತಂಬ ಪ್ರದೇಶ ದಿಂದ, ಆಹತಃ – ಹೊಡಯಲ್ಪಟ್ಟವನಾಗಿಯೂ, ಹಸ್ತೇನ — ಕೈಯಿಂದ, ಕಚೆ – ಕೇಶಪಾಶದಲ್ಲಿ; ಆನಮಿತಃ – ಬಗ್ಗಿಸಲ್ಪಟ್ಟವನಾಗಿಯೂ, ಅಧರಸು ಧಾಸ್ಯಂದೆನ, ಅಧರಸುಧಾ – ಅಧರಾಮೃತದ, ಸ್ಯಂದನ — ಸ್ರವಣದಿಂದ, ಸಂಮೋಹಿತಃ – ಮೋಹಗೊಳಿಸಲ್ಪಟ್ಟವನಾದಾಗ್ಯು, ಕಾಮಪಿ – ಹೇಳಲ ಶಕ್ಯವಾದ, ತೃಪ್ತಿಂ – ಸಂತೋಷವನ್ನು, ಆಪ — ಹೊಂದಿದನೋ, ತ ತ್ — ಆಕಾರಣದ್ದೆಸೆಯಿಂದ, ಕಾಮಸ್ಯ — ಮನ್ಮಥನ, ಗತಿಃ — ನಡತೆ ಯೂ, ವಾಮಾ – ವಕ್ರವಾದುದು, ಅಹೋ– ಆಶ್ಚರ್ಯವು.

ತಾ. ಶ್ರೀಕೃಷ್ಣನು ಆಸುಂದರಿಯಾದ ಮಂದಯಾನೆಯಿಂ ಬಾಹುಬಂ ಧನಮೊದಲಾದ ಶೃಂಗಾರಚೇಷ್ಟೆಗಳಿಂ ಪೀಡಿಸಲ್ಪಟ್ಟವನಾದಾಗ್ಯು ಬಹಳ ವಾಗಿ ಸಂತೋಷವನ್ನೆ ಹೊಂದಿದನೆಂಬುದರಿಂ ಮನ್ಮಥನ ಮಾಹಾತ್ಮ್ಯವುಬ ಹಳ ಆಶ್ಚರ್ಯಕರವಾದದ್ದು

ಶ್ಲೋ. ಆರಬ್ಧೆ ರತಿಕೇಳಿಸಂಕುಲರಣಾರಂಭೆ ತಯಾಸಾಹಸಪ್ರಾಯಂಕಾಂ ತಜಯಾಯಕಿಂಚಿದುಪರಿಪ್ರಾರಂಭಿಯತ್ಸಂಭ್ರಮಾತ್ ॥ ನಿಷ್ಪಂದಾಜಘನ ಸ್ಥಲೀಶಿಥಿಲಿತಾದೋರ್ವಲ್ಲಿರುತ್ಕಂಪಿತಂ ವಕ್ಷೋಮೀಲಿತ ಮಕ್ಷಿಪೌರುಷರಸ ಸ್ತ್ರೀಣಾಂಕುತಸ್ಸಿಧ್ಯತಿ॥

ಟೀ. ರತಿಕೇಳಿಸಂಕುಲರಣಾರಂಭೆ, ರತಿಕೇಳಿ—ಸುರತ, ಕ್ರೀಡೆಗ ಳಿಂದ, ಸಂಕುಲ– ವ್ಯಾಪ್ತವಾದ, ರಣಾರಂಭೆ – ಯುದ್ಧಾರಂಭವು, ಆ ರಬ್ಧೆಸತಿ — ಉಪಕ್ರಮಿಸಲ್ಪಡುತಿರಲಾಗಿ, ತಯಾ – ಆರಾಧೆಯಿಂದ,ಕಾಂ ತಜಯಾಯ, ಕಾಂತ – ನಾಯಕನ, ಜಯಾಯ — ಜಯಕ್ಕೋಸ್ಕರ, ಉ ಪರಿ – ಮೇಲೆ, ಸಂಭ್ರಮಾತ್ – ತ್ವರೆದೆಸೆಯಿಂದ, ಸಾಹಸಪ್ರಾಯಂ — ಸಾಹಸಾಧಿಕ್ಯವುಳ್ಳ, ಯತ್ – ಯಾವಸುರತವು, ಕಿಂಚಿತ್ – ಸ್ವಲ್ಪವಾಗಿ, ಆರಂಭಿ – ಪ್ರಾರಂಭಿಸಲ್ಪಟ್ಟತೊ, ತತ್ – ಅಸುರತದ್ದೆಸೆಯಿಂದ, ಜಘನ ಸ್ಥಲೀ – ನಡುವಿನಮುಂಭಾಗವು, ನಿಷ್ಪಂದಾ – ನಿಶ್ಚಂಚಲವಾದುದು, ದೋ ರ್ವಲ್ಲಿಃ – ಬಳ್ಳಿಯಂತಿರುವತೋಳು, ಶಿಥಿಲಿತಾ — ಸಡಲಿಸಲ್ಪಟ್ಟಿತು, ವ ಕ್ಷಃ – ವಕ್ಷಸ್ಥಳವು, ಉತ್ಕಂಪಿತಂ – ಕಂಪಿಸಲ್ಪಟ್ಟಿತು, ಅಕ್ಷಿ – ಕಣ್ಣು, ಮೀಲಿತಂ – ಮುಚ್ಚಲ್ಪಟ್ಟಿತು, ಪೌರುಷರಸಃ – ಪುರುಷಪರಾಕ್ರಮವು, ಸ್ತ್ರೀಣಾಂ — ಸ್ತ್ರೀರುಗಳಿಗೆ, ಕುತಃ — ಯಾವಕಾರಣದ್ದೆಸೆಯಿಂದ, ಸಿಧ್ಯತಿ — ಸಿದ್ಧಸುತಲಿಧೆ.

ತಾ. ಅತ್ಯಾಶ್ಚರ್ಯಕರವಾದ ಮನ್ಮಥಯುದ್ಧವು ನಡೆಯುತಲಿರಲಾಗಿ ತನ್ನಕಾಂತನಂ ಜೈಸಲೋಸುಗ ರಾಧೆಯಿಂದ ಉಪರಿಸುರತವು ಸ್ವಲ್ಪವಾಗಿ ಪ್ರಾರಂಭಿಸಲ್ಪಟ್ಟ ಮಾತ್ರದಿಂದಲೆ ಸಕಲ ಅವಯವಂಗಳು ಶಿಥಿಲಂಗಳಾದವು ಆದ್ದರಿಂದ ಸ್ತ್ರೀರುಗಳಿಗೆ ಪುರುಷನ ಸಾಮರ್ಥ್ಯವು ಹ್ಯಾಗತಾನೇ ಶಿದ್ಧಿಶೀತು.

ಶ್ಲೋ. ತಸ್ಯಾಃಪಾಟಲಪಾಣಿಜಾಂಕಿತಮುರೋನಿದ್ರಾಕಷಾಯೆದೃಶೌನಿರ್ಧೂತೋಧರಶೋಣಿಮಾವಿಲುಳಿತಾಸ್ರಸ್ತಸ್ರಜೋಮೂರ್ಧಜಾಃ ||ಕಾಂಚೀದಾಮದರಶ್ಲಥಾಂಚಲಮಿತಿಪ್ರಾತರ್ನಿಖಾತ್ತೈರ್ದೃಶೋರೇಭಿಃಕಾಮಶರೈಸ್ತದದ್ಭುತಮಹೋಪತ್ಯುರ್ಮನಃಕೀಲಿತಂ||

ಟೀ. ತಸ್ಯಾಃ – ಆರಾಧೆಯ, ಪಾಟಲಪಾಣಿಜಾಂಕಿತಂ, ಪಾಟಲ – ಬೀಳ್ಕಂಪಾದ, ಪಾಣಿಜ – ಉಗುರ್ಗಳಿಂದ, ಅಂಕಿತಂ –– ಗುರುತುಮಾಡಲ್ಪಟ್ಟ, ಉರಃ – ವಕ್ಷಸ್ಥಳವು, ನಿದ್ರಾಕಷಾಯೆ, ನಿದ್ರಾ – ನಿದ್ರೆಯಿಂದ, ಕಷಾಯೆ – ಕೆಂಪಾದ, ದೃಶೌ – ನೇತ್ರಗಳು, ನಿರ್ಧೂತಃ – ಹೋಗಲಾಡಿಸಲ್ಪಟ್ಟ, ಅಧರಶೋಣಿಮಾ – ತುಟಿಯಕೆಂಪು, ವಿಲುಳಿತಾಃ – ಜಗಳಿರುವ, ಸ್ರಜಃ – ಪುಷ್ಪಮಾಲೆಗಳು, ಸ್ರಸ್ತಾಃ – ಚದರಿರುವ, ಮೂರ್ಧಜಾಃ – ಕೊದಲುಗಳು, ದರಶ್ಲಥಾಂಚಲಂ, ದರ – ಸ್ವಲ್ಪವಾಗಿ, ಶ್ಲಥ – ಸಡಲಿರುವ, ಅಂಚಲಂ – ತುದಿಯುಳ್ಳ, ಕಾಂಚೀದಾಮ –– ಒಡ್ಯಾಣಸೂತ್ರವು, ಇತಿ – ಈಪರಿಯಾದ, ಎಭಿಃ – ಈಐದಾದ, ಪ್ರಾತಃ – ಬೆಳಗ್ಗೆ, ದೃಶೋಃ – ಕಣ್ಣುಗಳಲ್ಲಿ, ನಿಖಾತ್ತೈಃ – ನೋಡಲ್ಪಟ್ಟ, ಕಾಮಶರೈಃ – ಮನ್ಮಥನಬಾಣಗಳಿಂದ, ಪತ್ಯುಃ – ಕಾಂತನಾದಕೃಷ್ಣನ, ಮನಃ – ಮನಸ್ಸು, ಕೀಲಿತಮಿತಿಯತ್, ವ್ಯಥೆಪಡಿಸಲ್ಪಟ್ಟಿತು ಯೆಂಬುವದು ಯಾವದುಂಟೊ, ತತ್ –– ಅದು, ಅದ್ಭುತಮಹೇ – ಆಶ್ಚರ್ಯವೇಸರಿ. ತಾ. ಪ್ರಾತಃಕಾಲದೋಳ್ ಕಾಂತೆಯಾದ ರಾಧೆಯ ಜಗಳಿರುವ ಒಡವೆಗಳಂ ಬಳಲಿರುವ ಅವಯವಂಗಳಂ ನೋಡುತಲಿರುವ ಕೃಷ್ಣಸ್ವಾಮಿಗೆ ಮತ್ತುಮಿಮ್ಮಡಿಯಾದ ಸುರತಾಪೇಕ್ಷೆ ಯುಂಟಾದುದೆಂಬುದಾಶ್ಚರ್ಯವಲ್ಲವೆ.

ಶ್ಲೋ. ಅಥಕಾಂತಂರತಿಕ್ಲಾಂತಮಪಿಮಂಡನವಾಂಛಯಾ| ಜಗಾದಮಾಧವಂರಾಧಾಮುಗ್ಧಾಸ್ವಾಧೀನಭರ್ತೃಕಾ||

ಟೀ ಅಥ – ಅನಂತರದಲ್ಲಿ, ರತಿಕ್ಲಾಂತಮಪಿ, ರತಿ – ಸುರತದಿಂ, ಕ್ಲಾಂತಮಪಿ –– ಬಳಲಿರುವನಾದಾಗ್ಯು, ಕಾಂತಂ –– ನಾಯಕನಾದ, ಮಾಧವಂ – ಶ್ರೀಕೃಷ್ಣಸ್ವಾಮಿಯೆಂಕುರಿತು, ಮುಗ್ಧಾ –– ಸುಂದರಿಯಾ

ದ, ಸ್ವಾಧೀನಭರ್ತೃಕಾ, ಸ್ವಾಧೀನ - ಸ್ವಾಧೀನನಾದ, ಭರ್ತೃಕಾ - ಪ ತಿಯುಳ್ಳ, ಸ್ವಾಧೀನ - ಭರ್ತೃಕಾಯೆಂಬ ನಾಯಕಿಯಾದ, ರಾಧಾ - ರಾ ಧೆಯು, ಮಂಡನವಾಂಛಯಾ, ಮಂಡನ - ಅಲಂಕಾರದ, ವಾಂಛಯಾ -- ಅಭಿಲಾಷೆಯಿಂದ, ಜಗಾದ- ನುಡಿದಳು. ತಾ. ಅನಂತರದೊಳಾರಾ ಧೆಯು ತಾನು ಅಲಂಕಾರಗೊಳ್ಳಲೋಸುಗ ಮದನಕಳನದಿಂ ಬಳಲಿರುವನಾ ದಾಗ್ಯೂ ಕೃಷ್ಣನಂ ಕುರಿತಿಂತೆಂದಳು.

ಚತುರ್ವಿಂಶಾಷ್ಟಪದೀ ಪ್ರಾರಂಭಃ, ರಾಗ--ರಾಮಕ್ರಿಯಾ.

ಕುರುಯದುನಂದನಚಂದನಶಿಶಿರತರೇಣಕರೇಣಪಯೋಧರೇಮೃಗಮದಪತ್ರ ಕಮತ್ರಮನೋಭವಮಂಗಳಕಲಶಸಹೋದರೇ ||೧|| ನಿಜಗಾದಸಾಯದುನಂ ದನೇಕ್ರೀಡತಿಹೃದಯಾನಂದನೇನಿಜಗಾದಸಾಯದುನಂದನೇ|

ಟೀ. ಹೇಯದುನಂದನ - ಎಲೈಕೃಷ್ಣನೆ, ಚಂದನಶಿಶಿರತರೇಣ, ಚಂ ದನ - ಶ್ರೀಗಂಧದಂತೆ, ಶಿಶಿರತರೇಣ - ಅತಿಶೀತಳವಾದ, ಕರೇಣ - ಹಸ್ತದಿಂ ದ, ಮನೋಭವಮಂಗಳಕಲಶಸಹೋದರೆ, ಮನೋಭವ-ಕಾಮನ, ಮಂ ಗಳಕಲಶ - ಮಂಗಳಕುಂಭಕ್ಕೆ, ಸಹೋದರೇ - ಒಡಹುಟ್ಟಿದಂತಿರುವ, ಅ ತ್ರಸ್ಮಿನ್ ಪಯೋಧರೇ - ಈ ಸ್ತನದಲ್ಲಿ, ಮೃಗಮದಪತ್ರಕಂ, ಮೃಗಮದ -ಕಸ್ತೂ ರಿಯ, ಪತ್ರಕಂ - ಮಕರಿಕಾಪತ್ರವನ್ನು, ಕುರು - ಮಾಡು, ಇತಿ - ಹೀ ಗೆಂದು, ಸಾ - ಆ ರಾಧೆಯು, ಹೃದಯಾನಂದನೆ, ಹೃದಯ-ಮನಸ್ಸನ್ನು, ಆ ನಂದನೆ - ಸಂತೋಷಪಡಿಸುತಲಿರುವ, ಯದುನಂದನೆ - ಶ್ರೀಕೃಷ್ಣನು, ಕ್ರೀಡತಿಸತಿ - ಕ್ರೀಡಿಸುತ್ತಿರಲಾಗಿ, ನಿಜಗಾದ - ಪೇಳಿದಳು.

ಅಳಿಕುಲಗಂಜನಮಂಜನಕಂರತಿನಾಯಕಸಾಯಕಮೋಚನೇ| ತ್ವದಧರ ಚುಂಬನಲಂಬಿತಕರ್ಬುರಮುಜ್ವಲಯಪ್ರಿಯಲೋಚನೆ ನಿಜಗಾದ| ||೨||

ಟೀ. ಹೇಪ್ರಿಯ-ಎಲೈನಾಯಕನೆ, ರತಿನಾಯಕಸಾಯಕಮೋಚನೆ, ರತಿನಾಯಕ - ಮನ್ಮಥನ, ಸಾಯಕ - ಬಾಣಗಳನ್ನು, ಮೋಚನೆ -- ಬಿ ಡಿಸುತಲಿರುವ, ಲೋಚನೆ - ನೇತ್ರದಲ್ಲಿ, ಅಳಿಕುಲಗಂಜನಂ, ಅಳಿಕುಲ-- ತುಂಬಿಗಳಗುಂಪನ್ನು, ಗಂಜನಂ -- ತಿರಸ್ಕರಿಸುತಲಿರುವ, ತ್ವದಧರಚುಂ ಬನಲಂಬಿತಕರ್ಬುರಂ, ತ್ವತ್ --- ನಿನ್ನ, ಅಧರ --- ತುಟಿಯ, ಚುಂಬ ನ -- ಮುತ್ತುಕೊಳ್ಳುವದರಿಂದ, ಲಂಬಿತಂ - ಪ್ರಾಪ್ತವಾದ, ಕರ್ಬುರಂ-- ಚಿತ್ರವರ್ಣವುಳ್ಳ, ಅಂಜನಕಂ -- ಕಣ್ಕಪ್ಪನ್ನು, ಉಜ್ವಲಯ -- ಪ್ರಕಾಶ ಮಾಡು.

ನಯನಕುರಂಗತರಂಗವಿಕಾಸನಿರಾಸಕರೇಶ್ರುತಿಮಂಡಲೇ|ಮದನಿಜಪಾಶವಿ

ಲಾಸಧರೆಶುಭವೇಷನಿವೇಶಯಕುಂಡಲೆ ನಿಜಗಾದ.

ಟೀ. ಹೇಶುಭವೇಷ -- ಎಲೈ ಶೋಭನವಾದ ಅಲಂಕಾರವುಳ್ಳವನೆ, ನಯನಕುರಂಗತರಂಗವಿಕಾಸನಿರಾಸಕರೆ, ನಯನ -- ನೇತ್ರವೆಂಬ, ಕುರಂಗ--ಜಿಂಕೆಯು, ತುರಂಗವಿಕಾಸ-- ಚಲನಾಧಿಕ್ಯದ, ನಿರಾಸ-- ತಡೆಯನ್ನು, ಕರೆ -- ಮಾಡುತಲಿರುವ, ಮನಸಿಜಪಾಶವಿಲಾಸಧರೆ, ಮನಸಿಜ-- ಮನ್ಮಥನ, ಪಾಶ -- ಹಗ್ಗದ, ವಿಲಾಸ-ವಿಭ್ರಮವನ್ನು, ಧರೆ--ಧರಿಸುತಲಿರುವ, ಶ್ರುತಿಮಂಡಲೆ--ಕರ್ಣವಲಯದಲ್ಲಿ, ಕುಂಡಲೆ -- ಓಲೆಗಳನ್ನು, ನಿವೇಶಯಾ-ಇಡು.

ಭ್ರಮರಚಯಂರಚಯಂತಮುಪರಿರುಚಿರಂಸುಚಿರಂಮಮಸಮ್ಮುಖೆ। ಜಿತಕಮಲೆವಿಮಲೆಪರಿಕರ್ಮಯನರ್ಮಜನಕಮಲಕಮ್ಮುಖೆ ನಿಜಗಾದ ೪॥

ಟೀ. ಮಮ--ನನ್ನ ಸಮ್ಮುಖೆ--ಅಭಿಮುಖದಲ್ಲಿ, ರುಚಿರಂ--ಮನೋಹರವಾದ, ಭ್ರಮರಚಯಂ -- ತುಂಬಿಗಳಗುಂಪನ್ನು, ಸುಚಿರಂ -- ಬಹುಕಾಲದವರಿಗೂ, ರಚಯಂತಂ -- ಕಲ್ಪಿಸುತಲಿರುವ, ನರ್ಮಜನಕಂ -- ಕ್ರೀಡೆಯನ್ನುಂಟುಮಾಡುವ, ಅಲಕಂ--ಮುಂಗುರುಳನ್ನು, ಜಿತಕಮಲೆ, ಜಿತ--ಜೈಸಲ್ಪಟ್ಟ, ಕಮಲೆ-- ತಾವರೆಯುಳ್ಳ, ವಿಮಲೆ--ಸ್ವಚ್ಛವಾದ, ಮುಖೆ-ಮುಖದಲ್ಲಿ, ಪರಿಕರ್ಮಯ-ಅಲಂಕರಿಸು.

ಮೃಗಮದರಸಫಲಿತಂಲಲಿತಂಕುರುತಿಲಕಮಲಿಕರಜನೀಕರೆ॥ ವಿಜಿತಕಳಂಕಕಳಂಕಮಲಾನನವಿಶ್ರಮಿತಶ್ರಮಶೀಕರೆ ನಿಜಗಾದಸಾ. ೫॥

ಟೀ. ಹೇಕಮಲಾನನ--ಎಲೈ ಕಮಲದಂತಿರುವ ಮುಖವುಳ್ಳ ಕೃಷ್ಣನೆ, ವಿಶ್ರಮಿತಶ್ರಮಶೀಕರೆ, ವಿಶ್ರಮಿತ-ವಿಶ್ರಾಂತಿ ಹೊಂದಿಸಲ್ಪಟ್ಟ, ಶ್ರಮಶೀಕರೆ-ಬೆವರ್ನೀರಿನ ಬಿಂದುಗಳುಳ್ಳ, ಅಳಿಕರಜನೀಕರೆ-ಕಪಟಚಂದ್ರನಲ್ಲಿ, ಮೃಗಮದರಸಫಲಿತಂ, ಮೃಗಮದ-ಕಸ್ತೂರಿಯ, ರಸ-ರಸದಿಂದ,ಫಲಿತಂ-ಉಂಟಾದ, ವಿಜಿತಕಳಂಕಕಳಂ, ವಿಜಿತ -- ಜೈಸಲ್ಪಟ್ಟ,ಕಳಂಕ - ಲಾಂಛನದ, ಕಳಂ-ಕಾಂತಿಯುಳ್ಳ, ಲಲಿತಂ - ಮನೋಹರವಾದ,ತಿಲಕಂ-ಬೊಟ್ಟನ್ನು, ಕುರು-ರಚಿಸು.

ಮಮರುಚಿರೆಚಿಕುರೆಕುರುಮಾನದಮಾನಸಜಧ್ವಜಚಾಮರೆ ರತಿಗಳಿತೆಮಿಳಿತೆಕುಸುಮಾನಿಶಿಖಂಡಿಶಿಖಂಡಕಡಾಮರೆನಿಜಗಾದಸಾ. ೬॥

ಟೀ. * ಹೇಮಾನದ -- ಎಲೈಕಾಂತನಾದ ಕೃಷ್ಣನೆ, ಮಾನಸಜಧ್ವಜಚಾಮರೆ -- ಮಾನಸಜ -- ಮನ್ಮಥನ, ಧ್ವಜಚಾಮರೆ --- ಧ್ವಜಚಾಮರರೂಪವಾದ, ಶಿಖಂಡಿಶಿಖಂಡಕಡಾಮರೆ, ಶಿಖಂಡಿ-- ನವಿಲಿನ, ಶಿಖಂಡಕ--

ಗರಿಗಳಿಗೆ, ಡಾಮರೆ --- ತಿರಸ್ಕಾರವಾದ, ರತಿಗಳಿತೆ --- ರತಿಕ್ರೀಡೆಯಲ್ಲಿ, ಗಳಿತೆ -- ಜಗಳಿರುವ, ವಿಳಿತೆ -- ಕೇರಿಕೊಂಡಿರುವ, ರುಚಿರ -- ಮನೋಹರವಾದ, ಚಿಕುರ--ಕೇಶಗಳಲ್ಲಿ ಕುಸುಮಾನಿ-- ಪುಷ್ಪಗಳನ್ನು ಕುರು--ಮುಡಿಸು.

ಸರಸಘನೆಜಘನೆಮಮಶಂಬರದಾರಣವಾರಣಕಂದರೆ | ಮಣಿರಶನಾವಸನಾಭರಣಾನಿಶುಭಾಶಯವಾಸಯಸುಂದರೇ|ನಿಜಗಾದ ೭ ||

ಟೀ. ಹೇಶುಭಾಶಯ-ಎಲೈಮಂಗಳವಾದ ಅಭಿಪ್ರಾಯವುಳ್ಳ ಕೃಷ್ಣನೆ, ಸರಸಘನೆ, ಸರಸ-- ರಾಗದೊಡಗೂಡಿರುವ, ಘನೆ--ದಟ್ಟವಾದ, ಶಂಬರದಾರಣವಾರಣಕಂದರೆ, ಶಂಬರ --- ಶಂಬರನೆಂಬರಾಕ್ಷಸನಿಗೆ, ದಾರಣ-ಸಂಹಾರಕನಾದ, ಮನ್ಮಥನೆಂಬ, ವಾರಣ--ಆನೆಗೆ, ಕಂದರೆ--ಗುಹೆಯಾದ, ಸುಂದರೆ-ಮನೋಹರವಾದ, ಮಮ-ನನ್ನ ಜಘನೆ- ಕಟಿಪುರೋಭಾಗದಲ್ಲಿ, ಮಣಿರಶನಾವಸನಾಭರಣಾನಿ, ಮಣಿ -- ರತ್ನಮಯವಾದ, ರಶನಾ-ಒಡ್ಯಾಣವೇನು, ವಸನ-ವಸ್ತ್ರವೇನು, ಆಭರಣಾನಿ-ಒಡವೆಗಳೇನು, ಇವುಗಳನ್ನು, ವಾಸಯ-ವಾಸಮಾಡಿಸು.

ಶ್ರೀಜಯದೇವಸುಕವಿವಚನೆಹೃದಯಂಸದಯಂಕುರುಮಂಡನೆ|ಹರಿಚರಣಸ್ಮರಣಾಮೃತಕಲುಷಜ್ವರಸಂಜ್ವರಖಂಡನೆನಿಜಗಾದಸಾಯದುನಂದನೆಕ್ರೀಡತಿಹೃದಯಾನಂದನೆ ನಿಜಗಾದ. ... ... ೮||

ಟೀ. ಹೇಜನ-ಎಲೈಲೋಕವೆ, ಹರಿಚರಣಸ್ಮರಣಾಮೃತಕಲುಷಕಲುಷಜ್ವರಸಂಜ್ವರಖಂಡನೆ, ಹರಿ-ಶ್ರೀಕೃಷ್ಣನ, ಚರಣ-ಪಾದಗಳ, ಸ್ಮರಣ-ಧ್ಯಾನವೆಂಬ, ಅಮೃತ-- ಅಮೃತದಿಂದ, ಕಲುಷ-- ಪಾಪವೆಂಬ, ಜ್ವರ-ಜ್ವರದ, ಸಂಜ್ವರ--ಸಂತಾಪಕ್ಕೆ ಖಂಡನೆನಾಶಕವಾದ, ಮಂಡನೆ-- ಭೂಷಣರೂಪವಾದ, ಶ್ರೀಜಯದೇವಸುಕವಿವಚನೆ, ಶ್ರೀಜಯದೇವಸುಕವಿ-ಜಯದೇವನೆಂಬಕವಿಯ, ವಚನೆ--ವಾಕ್ಯನಲ್ಲಿ, ಹೃದಯಂ--ಮನಸ್ಸನ್ನು, ಸದಯಂ--ದಯೆಯೊಡನೆ ಕೂಡಿಕೊಂಡಿರುವದನ್ನಾಗಿ, ಕುರು -- ಮಾಡು.

ತಾ. ಎಲೈ ಕೃಷ್ಣನೆ ಸುರತಮಹೋತ್ಸವ ಸಂರಂಭದಿಂ ಜಗಳಿರುವ ಭೂಷಣಗಳಂ ಮತ್ತಂ-ನನ್ನ ಆಯಾಯ ಅವಯವಂಗಳೊಳಲಂಕರಿಸುವನಾಗೆಂದು ರಾಧಾದೇವಿಯು ಕೃಷ್ಣನಂ ಕುರಿತು ನುಡಿದಳು.

ರಚಯಕುಚಯೋಃಪತ್ರಂಚಿತ್ರಂಕುರುಷ್ವಕಪೋಲಯೋ ಘಟಯಜಘನೆ ಕಾಂಚೀಮಂಚಸ್ರಜಾಕಬರೀಭರೆ|ಕಲಯವಲಯಶ್ರೇಣೀಂಪಾಣೌಪದೆ

ಕುರುನೂಪುರಾವಿತಿನಿಗದಿತಃಪ್ರೀತಃಪೀತಾಂಬರೋಪಿತಥಾಕರೋತ್.

ಟೀ. ಎಲೈ--ಶ್ರೀಕೃಷ್ಣಸ್ವಾಮಿಯೆ, ಕುಚಯೋಃ -- ಸ್ತನಗಳಲ್ಲಿ ಪತ್ರಂ-- ಮಕರಿಕಾಪತ್ರವನ್ನು, ರಚಯ -- ಬರೆಯುವನಾಗು, ಕಪೋಲಯೋಃ--ಕೆನ್ನೆಗಳಲ್ಲಿ, ಚಿತ್ರಂ-ಅರಿಶಿನದರೇಖೆಯನ್ನು, ಕುರುಷ್ವ -- ಮಾಡು, ಜಘನೇ--ಕಟಿಪುರೋಭಾಗದಲ್ಲಿ, ಕಾಂಚೀ-- ಒಡ್ಯಾಣವನ್ನು, ಘಟಯ-- ಸೇರಿಸು, ಕಬರೀಭರೇ-- ಮುಡಿಯಲ್ಲಿ, ಸ್ರಜಂ -- ಮಾಲಿಕೆಯನ್ನು, ಅಂಚ--ಅಲಂಕರಿಸು, ಪಾಣೌ--ಹಸ್ತದಲ್ಲಿ, ವಲಯಶ್ರೇಣಿಂ -- ವಲಯಗಳಗಳ, ಶ್ರೇಣಿಂ--ಪಙ್ಕ್ತಿಗಳನ್ನು, ಕಲಯ--ಇಡು, ಪದೇ--ಪಾದದಲ್ಲಿ, ನೂಪುರೌ -- ಅಂದುಗೆಗಳನ್ನು, ಕುರು--ಮಾಡು, ಇತಿಹೀಗೆಂತೆಂದು, ನಿಗದಿತಃ--ಹೇಳಲ್ಪಟ್ಟ, ಪೀತಾಂಬರೋಪಿ - ಶ್ರೀಕೃಷ್ಣನೂಕೂಡ, ಪ್ರೀತಸ್ಸನ್--ಸಂತುಷ್ಟನಾದವನಾಗಿ, ತಥಾ -- ಹಾಗೆಯೆ, ಅಕರೋತ್--ಮಾಡಿದನು.

ತಾ. ಎಲೈಕೃಷ್ಣನೆ ನನ್ನ ಕುಚಮಂಡಲ ಗಂಡಸ್ಥಲ ಮೊದಲಾದ ಅಂಗಾಂಗಗಳೊಳು ಉಚಿತವಾದ ಒಡವೆಗಳಿಂ ಸಿಂಗರಿಸೆಂದು ನುಡಿಯಲ್ಪಟ್ಟ ಕೃಷ್ಣನು ಸಂತೋಷದೊಡಗೂಡಿ ಆ ರಾಧೆಯ ಮಾಭರಣಗಳಿಂದ ವಡಿಸಿದನು.

ಶ್ಲೋ. ಯದ್ಗಾಂಧರ್ವಕಳಾಸುಕೌಶಲಮನುಧ್ಯಾತಂ ಚಯದ್ವೈಷ್ಣವಂ ಯಚ್ಛೃಂಗಾರವಿವೇಕತತ್ವಮಪಿಯತ್ಕಾವ್ಯೇಷು ಲೀಲಾಯಿತಂ॥ತತ್ಸರ್ವಂ ಜಯದೇವಪಂಡಿತಕವೇಃಕೃಷ್ಣೈಕದಾಸಾತ್ಮನಸ್ಸಾನಂದಾಃ ಪರಿಶೋಧಯಂತು ಸುಧಿಯಶ್ಶ್ರೀಗೀತಗೋವಿಂದತಃ.

ಇತಿ ಶ್ರೀಕೃಷ್ಣದಾಸಜಯದೇವಕೃತೌಗೀತಗೋವಿಂದ ಮಹಾಕಾವ್ಯೇ ಸ್ವಾಧೀನಭರ್ತೃಕಾವರ್ಣನೆಸುಪ್ರೀತಪೀತಾಂಬರೋನಾಮದ್ವಾದಶಸ್ಸರ್ಗಃ.

ಟೀ. ಕೃಷ್ಣೈಕದಾಸಾತ್ಮನಃ, ಕೃಷ್ಣೆ -- ಶ್ರೀಕೃಷ್ಣಸ್ವಾಮಿಗೆ -- ಏಕ -- ಮುಖ್ಯವಾಗಿ, ದಾಸ -- ದಾಸಭೂತವಾದ, ಆತ್ಮನಃ -- ಸ್ವರೂಪವುಳ್ಳ, ಜಯದೇವಪಂಡಿತಕವೇಃ -- ವಿದ್ವಾಂಸನಾಗಿಯೂ, ಕವಿಯಾಗಿಯೂ, ಇರುವ, ಜಯದೇವನ - ಗಾಂಧರ್ವಕಳಾಸು ಸಂಗೀತವಿದ್ಯಯಲ್ಲಿ, ಯತ್ಕೌಶಲಂ -- ಯಾವಸೂಕ್ಷ್ಮಜ್ಞಾನವೊ, ವೈಷ್ಣವಂ -- ವಿಷ್ಣುಸಂಬಂಧಿಯಾದ, ಯದನುಧ್ಯಾತಂ -- ಯಾವಧ್ಯಾನವೂ, ಯತ್ -- ಯಾವ -- ಶೃಂಗಾರವಿವೇಕತತ್ವಮಪಿ, ಶೃಂಗಾರ -- ಶೃಂಗಾರರಸದ, ವಿವೇಕ--ಸದಸದ್ವಿವರಣೆಯ, ತತ್ವಂ -- ರಹಸ್ಯವೊ, ಕಾವ್ಯೇಷು -- ಕಾವ್ಯ

ಗಳಲ್ಲಿ, ಯತ್--ಯಾನ, ಲೀಲಯಿತಂ--ಲೀಲೆಯೊ, ತತ್ಸರ್ವಂ--ಆಸಮಸ್ತವನ್ನು, ಸುಧಿಯಃ-ವಿದ್ವಾಂಸರುಗಳು, ಸಾನಂದಾಃ- ಸಂತೋಷದೊಡಗೂಡಿದವರಾಗಿ, ಶ್ರೀಗೀತಗೋವಿಂದಕೇ- ಗೀತಗೋವಿಂದವೆಂಬ ಕಾವ್ಯದಲ್ಲಿ ಪರಿಶೋಧಯಂತು-ಶೋಧಿಸಲಿ.

ತಾ. ಶ್ರೀಕೃಷ್ಣನ ಚರಣಸೇವಕನಾದ ಜಯದೇವಕವಿಯು ಸಕಲವಿದ್ಯಾ ಚಾತುರ್ಯವನ್ನು ಬುದ್ಧಿವಂತರಾದವರು ಈ ಗೀತಗೋವಿಂದವೆಂಬ ಕಾವ್ಯದೊಳು ಪರಿಶುದ್ಧವಾಗಿ ತಿಳಿಯಲಿ.

ಶ್ಲೋ. ಅಖಿಲಾನಂದಸಂದಾಯಿಸತ್ಕರ್ಣಾಟಕಭಾಷಯಾ ॥ ಕೃತಾಷ್ಟಪದೀಟೀಕಾಮಭಿನಂದಂತು ಪಂಡಿತಾಃ । ಪೆರೀಸ್ವಾಮಿಸುತಶ್ರೀನಿವಾಸಲಕ್ಷ್ಮ್ಯಾತ್ಮಭುವಾ ॥ ತಿರ್ಮಲಾರ್ಯೇಣ ರಚಿತಾ ಜೀಯಾದ್ರಸಿಕರಂಜನೀ.

ಶ್ರೀಯದುಕುಲರಮಣ ಚರಣಯುಗಳ ಪರಿಚರಣಧುರೀಣಾಂತಃ
ಕರಣನಾದ ಪೆರೀಸ್ವಾಮಿ ತಿರುಮಲಾಚಾರ್ಯನಿಂದ
ವಿರಚಿತವಾದ ರಸಿಕರಂಜನಿ ಯೆಂಬ
ಗೀತಗೋವಿಂದಮಹಾಕಾವ್ಯದ
ಟೀಕಿಗೆ ಮಂಗಳಂಮಹಾ.

ಶ್ರೀಃ.

